# ಅಪರಂಜಿ

ನಗೆಯ ಕಾರಂಜಿ

- ಆನಂದ್
- ಶಿವರಾಮ ಕಾರಂತ
- ಜಿ. ಎನ್. ಜಿ.



ಅಪರಂಜಿ ವಾರ್ಷಿಕ ಸಂಪುಟ 1987-1988

ಕೇವಲ ಒಂದೂವರೆ ರೂಪಾಯಿ

# ಅಪರಂಜಿ

ಸಂಪುಟ–೫
ಸಂಚಿಕೆ–೧
ಅಕ್ಟೋಬರ್ 1987

ತಿಳಿನಗೆಯ ಕಾರಂಜ



## ...ನ್ಮ ದಿನೋತ್ಸವ ಸಂಚಿಕೆ

- ಆನಂದ್
- ಡಾ॥ ಎಚ್. ಕೆ. ರಂಗನಾಥ್
- ಭುವನೇಶ್ವರಿ ಹೆಗಡೆ
- ಶೀನೂ
- ಶಿವು
- ಜಿ.ಎಸ್.ಜಿ.
- ಕೇಷ
- ವಿಕಟಕವಿ
- ಡಾ॥ ಮಲ್ಲಿಕಾರ್ಜುನ ಪರಡ್ಡಿ
- ಟೀಯೆಸ್ಸಾರ್ರಾವ್

...ಡಿಪತ್ರಿಕೆ :ಕೇವಲ ಒಂದೂವರೆ ರೂಪಾಯಿ



(ತಿಳಿನಗೆಯ ಕಾರಂಜಿ)

ಸಂಪುಟ 5 ಅಕ್ಟೋಬರ್ 1987 ಸಂಚಿಕೆ 1

ಬಿಡಿ ಪ್ರತಿ ಕೇವಲ ಒಂದೂವರೆ ರೂಪಾಯಿ
ವಾರ್ಷಿಕ ಚಂದಾ 15 ರೂ.
ಆಜೀವ ಚಂದಾ : 150 ರೂ.
ಪೋಷಕರು : 500 ರೂ.

## ಎರಡು ಮಾತು

ಅಪರಂಜಿ ನಾಲ್ಕು ತುಂಬಿ ಐದಕ್ಕೆ ಕಾಲಿಟ್ಟಿದ್ದಾಳೆ. ಕಾಡಿನ ಹುಡುಗಿ ನಾಡಿಗೆ ಬಂದಾಗಿನಿಂದ ಆವಳನ್ನು ಅತ್ಯಂತ ಆತ್ಮೀಯತೆಯಿಂದ ಬರಮಾಡಿಕೊಂಡ ಬಂಧು ಗಳೆಲ್ಲರನ್ನೂ ಅಪರಂಜಿ ಕೃತಜ್ಞತೆಯಿಂದ ಸ್ಮರಿಸುತ್ತಾಳೆ. ಈ ಶುಭ ದಿನದಂದು ಭಗವಂತನು, ಎಲ್ಲ ಓದುಗರಿಗೂ, ಜಾಹಿರಾತುದಾರರಿಗೂ, ಲೇಖಕ, ಲೇಖಕಿ ಯರಿಗೂ ಸಕಲ ಸನ್ಮಂಗಳವನ್ನುಂಟುಮಾಡಲೆಂಬುದೇ ಆಕೆಯ ಪ್ರಾರ್ಥನೆ.

ಸಂಪಾದಕ
ಶಿವಕುಮಾರ್

ಗೌರವ ಸಲಹೆಗಾರರು
ಶ್ರೀ ಅ.ರಾ.ಸೇ.
ಶ್ರೀ ಶೇಷಗಿರಿ

ಅಪರಂಜಿ ಕಾರ್ಯಾಲಯ
119 [ಹಳೆಯ 36], 6ನೆ ಮುಖ್ಯ ರಸ್ತೆ
ಮಲ್ಲೇಶ್ವರಂ, ಬೆಂಗಳೂರು 560003

ಈ ಸಂಚಿಕೆಯಲ್ಲಿ......




ಮುದ್ರಣ : ಇಂಪ್ರೆಷನ್ಸ್, ಬೆಂಗಳೂರು–3 ದೂರವಾಣಿ : 362989, 363444

# ಅಪರಂಜಿ ಕಿಡಿ

---

ಸಾಬೂನು ಕಾರ್ಖಾನೆ ಅವ್ಯವಹಾರ ತನಿಖೆ ಆಯೋಗಕ್ಕೆ ನೇಮಕ.

—ಪತ್ರಿಕೆ.

ಆಯೋಗ ಬೇಕಾದಷ್ಟು ಕೊಳೆ ಬಟ್ಟೆ ತೊಳೆಯಬಹುದು !

* * * *

ವಿಶ್ವ ಕಪ್ ಪಂದ್ಯಗಳ ಮುನ್ನ, ಭಾರತೀಯ ಕ್ರಿಕೆಟ್ ಆಟಗಾರರು ಕ್ಷೌರದ ಸಾಮಗ್ರಿಗಳ ಜಾಹಿರಾತು ಖಂಡಿತ ಕೊಡಬಾರದು !

* * * *

ಮಧ್ಯವರ್ತಿಗಳಿಗೆ ಹಣ ನೀಡಿದ್ದು ನಿಜ.

—ನೊಬೆಲ್ ಇಂಡಸ್ಟ್ರೀಸ್ ಅಧ್ಯಕ್ಷ ಧನ್-ಹೋಂ.

ಅಧ್ಯಕ್ಷರ ಹೆಸರು ಸೂಕ್ತವಾಗಿದೆ !

* * * *

ಇಂಡಿಯನ್ ಎಕ್ಸ್‌ಪ್ರೆಸ್ ಕಚೇರಿಗಳ ಮೇಲೆ ತೆರಿಗೆ ದಾಳಿ.

—ಪತ್ರಿಕೆ.

ಶ್ರೀ ಜೇಠ್‌ಮಲಾನಿ ಅವರ ಪ್ರಶ್ನೆಗಳಿಗೆ ಉತ್ತರ ಈಗ ಸಿಕ್ಕಿತು ! !

* * * *

ಕಿತ್ತೂರು ಚೆನ್ನಮ್ಮ ಪ್ರತಿಮೆ ಪ್ರತಿಷ್ಠಾಪನೆಗೆ ತಡೆಯಾಜ್ಞೆ.

—ಸುದ್ದಿ.

ಹಿರಿಯರು ಇದಕ್ಕೆ ಕಿತ್ತಾಡಬಾರದು !

* * * *

ಕಾಂಗ್ರೆಸ್ ಬಲಪಡಿಸಲು ಕೇಂದ್ರ ಮಂತ್ರಿಗಳೊಬ್ಬರು ರಾಜೀನಾಮೆಗೆ ಸಿದ್ಧ.

—ಪತ್ರಿಕೆ,

ಅರ್ಥವಾಯಿತು ! !

* * * *

ಬೋಫೋರ್ಸ್ ವಿಷಯ ಸರ್ಕಾರದ ತನಿಖೆ ಎಲ್ಲ ಬೋFarce ಅಂತ ಅಪರಂಜಿ ನಕ್ಕಳಂತೆ !



ದರೋಡೆ ಬಿಟ್‌ಬಿಟ್ಟು ರಾಜಕೀಯಕ್ಕೆ ಸೇರ್ತೀನಿ
ಸಾಕಷ್ಟು ಅನುಭವ ಆಗಿದೆ.

5

# ಅತಿಥಿಯ ತಿಥಿ

**ಡಾ|| ಎಚ್.ಕೆ. ರಂಗನಾಥ್**

---

ದಮ್ಮಯ್ಯ, ಬೇಡ ಕಣ್ರೋ ಅಂದೆ.
ಬಿಡಲಿಲ್ಲ; ಎಳಕೊಂಡೇ ಹೋದರು.
ಮುಖ್ಯ ಅತಿಥಿಯ ತಿಥಿ ಮಾಡಿ ಕಳಿಸಿದರು.

ಅದೊಂದು ಸಮ್ಮೇಲನ. ಕರ್ನಾಟಕದಲ್ಲಿನ ಸಭೆ, ಸಮಾರಂಭಗಳ ಮುಖ್ಯ ಅತಿಥಿಗಳ ಮಹಾ ಸಮ್ಮೇಲನ. ಸುಮ್ಮನೆ ಸಮಾವೇಶವಾಗಿ ಯಾವುದೋ ಒಂದು ವಿಷಯದ ಮೇಲೆ ಮಾತನಾಡಿ, ಬೆಳಿಗ್ಗೆ ಟಿಫಿನ್, ಮಧ್ಯಾಹ್ನ ಊಟ, ಸಂಜೆಯ ಉಪಾಹಾರ, ಆ ಮೇಲೆ ಸಭೆ ಬರಕಾಸ್ತು ಎಂದರು. ಸಭೆ ನಿಕಳಾಯಿಸಿದ ನಂತರ ಮಿತ ಪರಿವಾರಕ್ಕೆ ಪಾನಕಪೂಜೆ ಎಂಬ ವಾಡಿಕೆಯ ಪಿಸುಮಾತಿನ ಆಹ್ವಾನವಿತ್ತು.

ಯಾಕಪ್ಪಾ, ನಾನೇ ಯಾಕೆ ಮುಖ್ಯ ಅತಿಥಿಯಾಗಬೇಕು? ಅಂದೆ.
ನಮ್ಮ ಲೊಕಾಲಿಟಿಯೋರು ಸಾರ್, ನಿಮ್ಮನ್ನ ಬಿಟ್ಟು ಮಾಡೋದುಂಟೆ ಅಂದ್ರು. ಇನ್ನು ಯಾವ ಅಪರಾಧ ನಂದು ? ಅಂದೆ.
ಏನು ಹೇಳದೆ ನೀವು ಎರಡೆರಡು ತಾಸು ಮಾತಾಡೋದನ್ನ ಕೇಳಿದೇವ ಸಾರ್ ಅಂದ್ರು.
ಸಿಕ್ಕಿಹಾಕಿಕೊಂಡೆ. ಅದೊಂದೇ ಅರ್ಹತೆ ನನಗೆ ಇದ್ದದು;
ಅದೊಂದೇ ಅರ್ಹತೆ ಅವರಿಗೆ ಬೇಕಾದದ್ದು ! ಹೋಗಲೇಬೇಕಾಯಿತು.

ಸಭೆಯಲ್ಲಿ ಒಟ್ಟು ಹದಿನೇಳು ಮಂದಿ ಅಷ್ಟೆ. ರಾಷ್ಟ್ರದ ಜನಸಂಖ್ಯೆಯ ನಿಟ್ಟಿನಿಂದ ನೋಡಿದರೆ ಸಮ್ಮೇಲನ ಸಣ್ಣದೇ. ಆದರೆ ಒಬ್ಬೊಬ್ಬರದೂ ಊರಗಲ ಬಾಯಿ; ಮೈಲು ಮೈಲುದ್ದ ಮಾತು! ಸರಿ, ಪ್ರಾರಂಭವಾಯಿತು ಸಭೆ.

ಸಮ್ಮೇಲನದ ಸಲುವಾಗಿಯೇ ಮುಂಬಯಿಯಿಂದ ಬಂದಿದ್ದ ಭೂಪಾಲಕ್ಕ ಅವರು ತಮ್ಮದೇ ಆದ ರೀತಿಯಲ್ಲಿ ಡಿ.ವಿ.ಜಿ.ಅವರ ಕವನವನ್ನು 'ಒಣಸುಮ' ಎಂದು ಪ್ರಾರಂಭಿಸಿ, ಅಪಾಯ ಸ್ಥಳದಲ್ಲಿ ನೆರವಲ್ ಮಾಡಿ, ಕಲ್ಪನಾ ಸ್ವರಗಳನ್ನು

ವಿರಿಸಿ. ಹಾರಿಸಿ. ಸಲವತ್ತು ನಿಮಿಷಗಳನ್ನು ನೆಲಸಮ ಮಾಡಿದ ಅನಂತರ ಆಕೆಯ ಭಾವ—ಸಮ್ಮೇಲನದ ಕಾರ್ಯದರ್ಶಿ ಕಂಪಾರಪ್ಪ ಕದರಕಟ್ಟಿ—ಅವರು ಎದ್ದು ನಿಂತು. ಮೀಸೆ ಹುರಿಮಾಡಿಕೊಂಡು, "ನಾನು ಭಾಷಣಕಾರನಲ್ಲ. ನನಗೆ ಭಾಷಣ ಮಾಡಲು ಬರುವುದಿಲ್ಲ. ಅದು ಬೇಕಾಗಿಯೂ ಇಲ್ಲ. ನಾನು ಭಾಷಣಗಳನ್ನು ಕೇಳುವವನೂ ಅಲ್ಲ. ಮಾಡುವವನೂ ಅಲ್ಲ. ಈವರೆಗೆ ನಾನು ಭಾಷಣ ಮಾಡಿಲ್ಲ. ಮುಂದೆ ಮಾಡುವುದೂ ಇಲ್ಲ. ಏಕೆಂದರೆ, ಜಗತ್ತಿನ ಎಲ್ಲ ಜಾಡ್ಯ ಜಂಜಾಟಗಳನ್ನೂ ಮಾಡುತ್ತಿರುವವರು ಕೇವಲ ಭಾಷಣಕೋರರು. ಸಭೆ ಸಮಾರಂಭಗಳಿರಲಿ, ಸಂತೆ ಜೊಂತೆಗಳಲ್ಲಿ, ಮನೆ ಮಠಗಳಲ್ಲಿ ಕೂಡ ಯಾರೂ. ಯಾವಾಗಲೂ, ಏತಕ್ಕೆಂದರೂ ಭಾಷಣಮಾಡಲೇ ಕೂಡದೆಂಬುದು ನನ್ನ ಮತ. **ಮಾತಿನಿಂದ ಘರ್ಷಣೆ; ಮೌನದಿಂದ ಶಾಂತಿ.** ಏಕೆಂದರೆ ಅದೇ ನನ್ನ ಮನೆಯಲ್ಲಿನ ನಿತ್ಯಾನುಭವ. ನನಗಂತೂ ಭಾಷಣ ಕೇಳಿ ಕೇಳಿ ಕಿವಿ ತೂತು ಬಿದ್ದುಹೋಗಿದೆ. ಆದಕ್ಕೇ ನಾನು ಭಾಷಣ ಮಾಡುವುದೇ ಇಲ್ಲ. ಏಕೆಂದರೆ......

ಎನ್ನುವಷ್ಟರಲ್ಲಿ ಸಭೆಯ ಮೂಲೆಯಲ್ಲಿ ಕೂತಿದ್ದ ಒಬ್ಬ ಗಡವ ಗಂಡಸು ತಲೆ ಎತ್ತದೆಯೆ ಹೆಣ್ಣು ಧ್ವನಿಯಲ್ಲಿ

"ಈಗ ನಮಗೂ ಕಿವಿ ತೂತು ಬಿದ್ದುಹೋಗುತ್ತಿದೆ. ಮೊದಲು ನಿಮ್ಮ ಭಾಷಣ ನಿಲ್ಲಿಸಿ" ಎಂದು ಆರಚಿಕೊಂಡಾಗ, ಸುಡುಕೋಪದಿಂದ ಕೆಂಡ ಕೆಂಡವಾದ ಕಾರ್ಯದರ್ಶಿಗಳಿಗೆ ಮಾತು ಹೊರಡದೆ, ನಿಂತಲ್ಲಿಯೇ ನೃತ್ಯ ಮಾಡಿದರು. ಅನೇಕ ಬಗೆಯ ಧ್ವನಿ ವಿಶೇಷಗಳನ್ನು ಹೊರಡಿಸುತ್ತ, ಸಭೆ ವಿಜೃಂಭಿಸಿತು. ಆಗಲೀಗ ಕಾರ್ಯ ದರ್ಶಿಗಳನ್ನು ಜಗ್ಗಿ ಕುರ್ಚಿಯ ಮೇಲೆ ಕುಕ್ಕರಿಸಿದ ಉದ್ಘಾಟಕ, ಉಪ್ಪಾರಪೇಟೆಯ ಉಗ್ರನರಸಿಂಹಯ್ಯ ಅವರು ಅಗಾಧವಾಗಿ ಎದ್ದು ನಿಂತು, ತಮ್ಮ ಸಣ್ಣನೆಯ ಶಾಂತ ಧ್ವನಿಯಲ್ಲಿ ಇಂತಹ ಸಮ್ಮೇಲನದ ಉದ್ಘಾಟನೆಯ ಮಹತ್ವವನ್ನು ವಿವರಿಸಿ ಹೇಳಿದ್ದ ಲ್ಲದೆ ತಾವು ಹೇಗೆ ಇದಕ್ಕೆ **ಅತ್ಯಂತ ಅಯೋಗ್ಯರು** ಎಂಬ ಪೂರ್ವ ಪಕ್ಷವನ್ನು ಮಂಡಿ ಸಿದಾಗ ಅವರನ್ನು ಸಭೆ ಒಕ್ಕೊರಲಿನಿಂದ ಅಡ್ಡಗಟ್ಟಿ, "ಸರಿ ಮತ್ತೆ. ಕೂತುಕೊಳ್ಳಿ. ನಿಮ್ಮ ಭಾಷಣ ತಡಯೋಕೆ ಸಾಧ್ಯವಿಲ್ಲ. ಕಿವಿ ತೂತು. ಕಿವಿ ತೂತು. ಭಾಷಣ ಮಾಡದೆಯೇ ಉದ್ಘಾಟಿಸಿ. ಸಾಕು" ಎಂದು ಹಟಮಾಡಿ "ಸಾಕು ಕೂತುಕೊಳ್ಳಿ. ಈಗಾಗಲೇ ಊಟದ ಹೊತ್ತಾಯಿತು. ಇನ್ನು ಮುಖ್ಯ ಅತಿಥಿ ಅವರು ಹೇಳುವು ದನ್ನೆಲ್ಲಾ ಹೇಳಿ ಮುಗಿಸಲಿ. ಅನಂತರ ತಕ್ಷಣ ಊಟಕ್ಕೆ ಹೋಗೋಣ" ಎಂದು ಗಜಿ ಬಿಜಿ ಮಾಡಿದಾಗ, ನಿರ್ವಹವಿಲ್ಲದೆ ಎದ್ದು ನಿಂತೆ.

ಎದ್ದು ನಿಂತೆ. ಸಭೆಗೆ ಕೈ ಮುಗಿದೆ. ಕೈ ಕಾಲು ನಡುಕ.

**"ಕಿವಿ ಮಾತು"** ಎಂಬ ಮಾತು ಮತ್ತೆ ಮತ್ತೆ ಇಲ್ಲಿ ಕೇಳಿ ಬಂದದ್ದರಿಂದ ಅದನ್ನೇ ಕುರಿತು ಊಟದ ಅನಂತರ ತಾವು ವಿವೇಚಿಸಬಹುದೆನಿಸುತ್ತದೆ. ಇಷ್ಟು ಶಾಂತಿ ಸಾವಧಾನಗಳಿಂದ ನನ್ನ ಭಾಷಣ ಕೇಳಿದ್ದಕ್ಕೆ ವಂದನೆ" ಎಂದು ಕೂಗಿ ಹೇಳಿ ಕುಳಿತೆ. ಆಗ ಸಭೆಯ ಸಂತೋಷ ಹೇಳತೀರದು.

ಸರಿ ಊಟ! ನಾಲಿಗೆಗೆ ಬೆಂಕಿ ಹೊತ್ತಿಸುವ ಖಾರದ ಸಾರು; ಯಥೇಚ್ಛವಾಗಿ ಶುಂಠಿ ಮತ್ತು ಹಸಿರು ಮೆಣಸಿನಕಾಯಿ ಅರೆದು ತಿರುವಿ ಸುರಿದ ತಿಳಿ ಮಜ್ಜಿಗೆ, ಅನ್ನ, ಉಪ್ಪು. ಇಷ್ಟೇ ಅಡಿಗೆ! ಹೀಗೆ ಯಾಕ್ರಪ್ಪಾ ಅಂದೆ. "ಊಟದ ಅನಂತರ ಉದರದ ಉರಿಯಿಂದಾಗಿ ಯಾರೂ ನಿದ್ರೆ ಮಾಡಲು ಸಾಧ್ಯವಾಗುವುದಿಲ್ಲ ಸಾರ್, ಮಧ್ಯಾಹ್ನದ ಸೆಶನ್‌ನಲ್ಲಿ ಎಲ್ಲರೂ ಖಂಡಿತ ಎಚ್ಚರವಿರುತ್ತಾರೆ" ಎಂಬುದು ಕಾರ್ಯದರ್ಶಿ ಕೊಟ್ಟ ಕಾರಣ.

ಆತನ ಮಾತು ನಿಜ. ಮಧ್ಯಾಹ್ನದ ಸಭೆಯಲ್ಲಿ ಹಾಹಾಕಾರಪಟ್ಟು ಸಭೆ ನೀರು ಕುಡಿದದ್ದೇ ಕುಡಿದದ್ದು: ಕುಡಿದದ್ದೇ ಕುಡಿದದ್ದು!

ಬಿಡದೆ ಹಿಡಿದು ನನ್ನನ್ನು ಮತ್ತೆ ಮಧ್ಯದ ಕುರ್ಚಿಯಲ್ಲಿ ಕುಳ್ಳಿರಿಸಿದರು. ಸಭೆ ಪ್ರಾರಂಭವಾಯಿತು ಎನ್ನುವಷ್ಟರಲ್ಲಿ ಕುಪ್ಪೆಮಾತ್ರೆ ಕರಿಯಪ್ಪ ಪಂಡಿತರು ಒಂದೇ ಹಾರಿಕೆಗೆ ವೇದಿಕೆಯನ್ನೇರಿ ಉಗ್ಗಡಿಸಿದರು. ಹೀಗೆ:

"ಕಿವಿ ತೂತು" ಎಂಬ ವಿಷಯವನ್ನು ವಿವೇಚನೆಗಾಗಿ ಇಂದಿನ ಮುಖ್ಯ ಅತಿಥಿ ಅವರು ಸೂಚಿಸಿದ್ದಾರೆ. ಅಮೋಘವಾದ ವಿಷಯ ಇದು. ಮೊದಲು ಕಿವಿಯ ವಿಷಯ ನಾಲ್ಕು ಮಾತನ್ನಾಡಿ ಅನಂತರ ತೂತನ್ನೆತ್ತಿಕೊಳ್ಳುತ್ತೇನೆ. ಮನುಷ್ಯನ ಮುಖಕ್ಕೆ ಅಂಟಿಕೊಂಡ ಅತ್ಯಂತ ಅಸಹ್ಯವಾದ ವಸ್ತು ಎಂದರೆ ಕಿವಿ. ಕನ್ನಡಿಯಲ್ಲಿ ನೋಡಿಕೊಳ್ಳಿ. ಆಗ ತಿಳಿದೀತು ಅದೆಂಥ ಅರ್ಥಹೀನ ಅಂಗ ಅಂತ. ಹರಿದ ಅರಳೀ ಎಲೆಯ ಹಾಗೆ ಹರಡಿಕೊಂಡು ಮುಖದ ಎರಡೂ ಬದಿಗಳಲ್ಲಿ ಅವಲಕ್ಷಣವಾಗಿ ಅಂಟಿಕೊಂಡಿರುವ ಕಿವಿಗಳನ್ನು ಭಗವಂತ ಯಾಕಾದರೂ ಅಲ್ಲಿ ಅಂಟಿಸಿದನೋ, ಅವನೊಬ್ಬನಿಗೇ ಗೊತ್ತು. ಅದರಿಂದ ಯಾವ ಪ್ರಯೋಜನವೂ ಇಲ್ಲ. ಯಾಕೆಂದರೆ" ಎನ್ನುವಷ್ಟರಲ್ಲಿ ಜನ್ಮಜನ್ಮಾಂತರಗಳಿಂದ ಅವರ ಪ್ರತಿಕಕ್ಷಿ ಆಗಿದ್ದ ಶುಂಠೀಕಷಾಯದ ಶರಭಣ್ಣನವರು ನಿಂತು ಕೈ ಕಾಲು ಕೊಡವುತ್ತ, "ಯಾಕೆ ಪ್ರಯೋಜನವಿಲ್ಲ ? ಪ್ರೈಮರಿ ಶಾಲೆಯಿಂದ ಹಿಡಿದು ಇಂದಿನವರೆಗೂ ನೀವು ಕಿವಿಯನ್ನ ಬೇರೆಬೇರೆಯವರಿಂದ ವಿಧವಿಧವಾಗಿ ಹಿಂಡಿಸಿಕೊಳ್ಳುತ್ತಿಲ್ಲವೆ? ನಿಮ್ಮ ಕಿವಿಯ ಪ್ರಯೋಜನ ನಿಮಗೇ ಇಲ್ಲದಿರಬಹುದು. ಆದರೆ ಇತರರಿಗೆ ಇಲ್ಲವೆ ?" ಎಂದು ಉಗ್ಗಡಿಸಿ ಗೆದ್ದ ಹುಂಜದಂತೆ ಕೇಕೆ ಹಾಕಿದಾಗ ಕುಪ್ಪೆಮಾತ್ರೆ ಅವರ ಕಿವಿ ಕೆಂಪು ಕೆಂಪಾಯಿತು.

ಅವರನ್ನು ಜಗ್ಗಿ ಕುಳ್ಳಿರಿಸಿದ ಕಾರ್ಯದರ್ಶಿ ಅವರು "ಇನ್ನು ಯಾರಾದರೂ ಮಾತನಾಡು ವುದಿದೆಯೇ" ಎಂದು ಕೇಳಿದಾಗ ಒಟ್ಟು ಸಭೆಗೆ ಸಭೆಯೇ ಎದ್ದು ನಿಂತಿತು. ಎಲ್ಲ ರನ್ನೂ ವೈಯಕ್ತಿಕವಾಗಿ ಸುತ್ತಲೂ ಮತ್ತೆ ಮತ್ತೆ ನಿಟ್ಟಿಸಿದ ಕಾರ್ಯದರ್ಶಿ ಕದರಕಡ್ಡಿ ಯವರು, ವಿಶ್ವೇಶ್ವರಪುರದ ವಿಜ್ಞಾನ ಮಂಡಲಿಯ ಅಧ್ಯಕ್ಷ ವಿಚಾರಪ್ಪನವರನ್ನು ವೇದಿಕೆಗೆ ಆಹ್ವಾನಿಸಿ, ಉಳಿದೆಲ್ಲರನ್ನೂ ಕುಳ್ಳಿರುವಂತೆ ಗದರಿಕೊಂಡ ಮೇಲೆ ಸಭೆ ಸ್ತಬ್ಧವಾಯಿತು.

ನಾನು ಕಂಡ ಅತ್ಯಂತ ಸಣ್ಣ ತಲೆಯ, ಆದರೆ ಅಗಾಧವಾದ ದೇಹದ ವಿಚಾ ರಪ್ಪನವರು ಅತ್ಯಂತ ಸಾವಕಾಶವಾಗಿ, balance ತಪ್ಪದಂತೆ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ, ವೇದಿಕೆಯವರೆಗೆ ಬಂದು ಅದನ್ನು ಹತ್ತಲಾರದೆ ಅಲ್ಲಿಂದಲೇ "ನೋಡಿ ಆಡಿದ ಮಾತು ವೈಜ್ಞಾನಿಕವಾಗಿರಬೇಕು. ಇದುವರೆಗೆ ಇವರೆಲ್ಲ ಆಡಿದ ಹಾಗೆ ಗಾಳಿಜಾಲ ಆಗಬಾರದು. ನಾನು ಕಿವಿಯ ಪರವಾಗಿ ಮಾತನಾಡುವವನು. ಪಾಪ, ಕಿವಿಯನ್ನೇಕೆ ಹಳಿಯುತ್ತೀರಿ ? ಕಿವಿ ಇಲ್ಲದಿದ್ದರೆ ಸಂಗೀತ, ಸಾಹಿತ್ಯ, ಕಲೆ, ಸಂಭಾಷಣೆ, ಸರಸ, ವಿರಸ, ಸಮರಸ ಸಾಧ್ಯವಾಗುತ್ತಿತ್ತೆ ? ಭೋಂಕಾಗಳು, ಹಾರನ್ನುಗಳು ಕಿವಿ ಇಲ್ಲದಾಗಿ ಕೇಳಿಸದೆ ಹೋದರೆ ರಸ್ತೆಯಲ್ಲಿ ನಡೆಯುವುದಾದರೂ ಹೇಗೆ? ಹಿಂದಿನಿಂದ ಯಾರಾದರೂ ಚಪ್ಪಾಳೆ ಹೊಡೆದು ಕೂಗಿದಾಗ, ತಿರುಗಿ ನೋಡಲು ಸಾಧ್ಯವೆ? ದೇವರಿಗಿಂತ ನಾವೇನೂ ಬುದ್ಧಿವಂತರಲ್ಲ. ಅದಕ್ಕೇ ಆತ, ಒಂದೊಂದು ಸಾಲದೆಂದು ಎರಡೆರಡು ಕಿವಿಗಳನ್ನು ಕೊಟ್ಟಿದ್ದು. ಸುಮ್ಮನೆ, ಒಂದು ಬಾಯಿ ಇದೆ ಅಂತ ಬೊಗಳಬಾರದು. ಹಾಗೆ ನೋಡಿದರೆ ಪಂಚೇಂದ್ರಿಯಗಳಲ್ಲಿ ಅಹಿಂಸೆಯ ಸಂಕೇತವಾಗಿ ಇರುವ ಒಂದೇ ಇಂದ್ರಿಯವೆಂದರ ಕಿವಿ. ಎರಡನ್ನೂ ಹಿಡಿದು ಹಿಂಡಿದಾಗ ಕೂಡ ಅದು ಏನನ್ನೂ ಮಾಡುವುದಿಲ್ಲ. ಇದನ್ನು ನೀವು ಅರ್ಥ ಮಾಡಿಕೊಳ್ಳಬೇಕು" ಎನ್ನುವಲ್ಲಿ ಏದುಬ್ಬುಸ ಬಂದುದರಿಂದ ವೇದಿಕೆಯ ಮೇಲೆಯೇ ಕುಸಿದು ಕುಳಿತು ತಮ್ಮ ಅತ್ಯಂತ ಸಣ್ಣ ತಲೆಯನ್ನು ಎಡಕ್ಕೆ ವಾಲಿಸಿದರು.

ಆಗಲೇ ಕೊಕ್ಕರೆಗಾಲಿನ ಕಂಗಾಲಪ್ಪ ಅವರು ಸಭೆಯ ತುದಿಯಲ್ಲಿದ್ದವರು ಒಂದೇ ಹಾರಿಕೆಗೆ ವೇದಿಕೆಯ ಬಳಿ ಬಂದು, ಒಂದೇ ಏರಿಕೆಗೆ ಏರಿ, ತಾರಕ ಸ್ಥಾಯಿ ಯಲ್ಲಿ ಹೀಗೆ ಅರಚಿಕೊಂಡರು. "ಸಭಿಕರೆ, ಇವರು ಏನಾದರೂ ಹೇಳಲಿ: ಬೀಜಾರ್ಥ ವೆಂದರೆ ನನ್ನ ಕಿವಿಯನ್ನು ಕಂಡರೆ ನನಗೇ ಆಗುವುದಿಲ್ಲ. ಯಾಕೆಂದರೆ ಬೇಕಾದದ್ದನ್ನು ಕೇಳಲು ತೆರೆದುಕೊಂಡು ಬೇಡವಾದಕ್ಕೆ ಮುಚ್ಚಿಕೊಳ್ಳುವಂತಹ ಮುಚ್ಚಳವಿಲ್ಲ ಕಿವೀಗೆ. ಕಣ್ಣಿಗೆ ರೆಪ್ಪೆ ಕೊಟ್ಟ ದೇವರು, ಬಾಯಿಗೆ ತುಟ್ಟಿ ಕೊಟ್ಟ ದೇವರು, ಕಿವಿ ಗೇಕೆ ಮುಚ್ಚಳ ಕೊಡಲಿಲ್ಲ ?"ಎಂದು ಕತ್ತೆತ್ತಿ ದೇವರ ಮೇಲೆ ಸಿಕ್ಕಾಪಟ್ಟೆ ರೇಗಿ ದಾಗ, ಸಭೆಯಲ್ಲಿದ್ದ ಸುಬ್ಬಪುಟ್ಟಣ್ಣ ಅವರು ಕುಳಿತಲ್ಲಿಯೇ ಮಡಿಕೋಲಿನಂತೆ

ಎಗರಿ ನಿಂತು "ಮೂಗಿಗೂ ಮುಚ್ಚಳವಿಲ್ಲವಲ್ಲಪ್ಪಾ! ಸುಮ್ಮನೆ ದೇವರನ್ನೇಕೆ ಬಯ್ಯು ತ್ತೀರಿ ? ಅದನ್ನ ಕೊಡಲಿಲ್ಲ, ಇದನ್ನ ಕೊಡಲಿಲ್ಲ ಅಂತ. ಕಿವಿಗೆ ಮುಚ್ಚಳ ಅಂಟಿಸ ದಿದ್ದರೂ ದೇವರು ನಿಮಗೆ ಕೈ ಕೊಟ್ಟಿಲ್ಲವೆ ? ಆದರಿಂದ ಕಿವಿ ಮುಚ್ಚಿಕೊಂಡು ತೆಪ್ಪಗೆ ಕೂತುಕೊಳ್ಳಿ" ಎಂದು ಶಾಸನ ಮಾಡಿದರು. ಅವರ ನಿಕಟ ಸ್ನೇಹಿತರೂ, ಹಿಂದೆಯೇ ಕುಳಿತಿದ್ದವರೂ ಆದಹಂದೀಕೊಳ್ಳದ ಹಿಂಗಪ್ಪಣ್ಣ ಅವರು ಎದ್ದು, ಪಂಚೆ ಸರಿಮಾಡಿಕೊಂಡು ವೇದಿಕೆಗೆ ಧಾವಿಸಿ. ಏರಿ, ಕಂಗಾಲಪ್ಪ ಅವರ ಪಕ್ಕದಲ್ಲಿಯೇ ನಿಂತು. ಕೈ ಎತ್ತಿ—

"ಇಲ್ಲಿ ಕೇಳ್ರೀ. ಕಿವೀಗೆ ಯಾಕೆ ದೇವರು ಮುಚ್ಚಳ ಮಡಗಲಿಲ್ಲ ಅಂತ. ಇವರು— ಯಾರಿವರು? ಏನಿವರ ಹೆಸರು? ಏನೋ ಸುಡುಗಾಡು. ಇರಲಿ, ಇವರು ನಿಜವಾಗಿ ಬೀಜಪ್ರಶ್ನೆ ಎತ್ತಿದ್ದಾರ. ದೇವರು ಕೊಡದೇ ಇದ್ದದ್ದನ್ನ ಮನುಷ್ಯ ತನ್ನ ಸ್ವಂತ ವಿಚಾರಶಕ್ತಿಯಿಂದ ತುಂಬಿಕೊಳ್ಳೋದು ಜಾಣತನ. ಕಿವೀಗಿಲ್ಲ ಮುಚ್ಚಳ: ಮೂಗಿ ಗಿಲ್ಲ ಮುಚ್ಚಳ ಅಂತ ಗೋಗರೆದರೆ ಆಗುತ್ಯೆ ? ಇಲ್ಲಿ ನೋಡಿ" ಎಂದು ಕೂಗಿ ಹೇಳಿ ತಮ್ಮ ಎರಡೂ ಕಿವಿಗಳ ಒಳಗ ಹಿಂದೆಯೇ ತುರುಕಿದ್ದ ಹತ್ತಿಯ ಉಂಡೆಗಳನ್ನು ಸ್ವಂತ ಕೈಬೆರಳುಗಳಿಂದ ಎಳೆದು ಹೊರಡೆಗೆದು ಸಭೆಗೆ ತೋರಿ demonstrate ಮಾಡುತ್ತ. ಕಿವಿ ಮೂಗುಗಳಿಗೆ ಮುಚ್ಚಳ ಕೊಡದಿದ್ದರೂ, ಪರಮಾತ್ಮನಾದ ಭಗ ವಂತ ತನ್ನ ಭಕ್ತರ ಸಲುವಾಗಿ ಹತ್ತಿಯನ್ನು ಹುಟ್ಟಿಸಲಿಲ್ಲವೆ ? ಅದರ ಮೂಲ ಧ್ಯೇಯವೆಂದರೆ ಕಿವಿಗೆ ಗಿಡಿಯುವುದು. ಇದು ನನ್ನಲ್ಲಿ ಇದ್ದದ್ದರಿಂದಲೆ ಇಂಥ ಸಭೆಗಳಲ್ಲಿ ಕೂಡ ನಾನು ಸುಖವಾಗಿ ಇರಬಲ್ಲೆ! ಇಷ್ಟೂ ತಿಳಿಯದೆ ? ನೀವು ಗದ್ದಲದಿಂದ ಗುದ್ದಾಡುತ್ತಿರುವುದು ಹಾಸ್ಯಾಸ್ಪದ. ನಾಚಿಕೆಗೇಡು" ಎಂದು ಕೂಗಿ ಕೈಮುಗಿಯು ವಲ್ಲಿ ಸಭೆಯ ಮತ್ತೊಂದು ಮೂಲೆಯಿಂದ ಪೀಪಿಯಂತಹ ಧ್ವನಿ ಹೊರಟಿತು.

"ಹತ್ತಿಯಿಂದ ಅಜ್ಜಮ್ಮಗಳು ಬತ್ತಿಯನ್ನು ಮಾಡುವುದಿಲ್ಲವ? ಹರಿಕಥೆಗಳಿಗೆ ಹೋಗಿದ್ದಾರಾ ? ತನ್ನ ಪೂಜೆಗಾಗಿ ಬತ್ತಿ ಇಟ್ಟುಕೊಳ್ಳುವುದಕ್ಕಾಗಿಯೇ ದೇವರ್ರು ಹತ್ತಿ ಹುಟ್ಟಿಸಿದ್ದು ಮೂಲದಲ್ಲಿ! ಇಷ್ಟೂ ತಿಳಿಯಲ್ಲ ನಿಮಗೆ. ಕುಕ್ಕರಿಸಿ. ಸಾಕು"

ಆಗಲೀಗ ಪಿಳ್ಳೆಜುಟ್ಟಿನ ಪೀತಾಂಬರಪ್ಪನವರು ವೇದಿಕೆಗೆ ಧಾವಿಸಿ ಮಾಡಿದ ಭಾಷಣದ ಸಾರಾಂಶ ಇಷ್ಟು.

"ಭಗವಂತನ ವಿಕಾಸ ವೈಭವ ಇಲ್ಲಿಗೇ ಮುಗಿಯಲಿಲ್ಲ. ಭಗವಂತನ ವಿಕಾಸ ವೈಭವ ಎಂದರೆ ಮಾನವ ವಿಕಾಸವಾದ. ಇನ್ನು ಕೇವಲ ತೊಂಭತ್ತನಾಲ್ಕು ದಶ ಲಕ್ಷ ವರುಷಗಳೊಳಗಾಗಿ ಮಾನವ ಕರ್ಣಗಳ ಹೊರ ಹರಡು ಇಂಗಿ, ಈಗ ಕಪಾಲ

ಗಳ ಪಕ್ಕದಲ್ಲಿ ಹೊಮ್ಮಿಕೊಂಡಿರುವ 'ಇಯರ್ ಸ್ಟೆಂ' ಎಂದರೆ ಕರ್ಣ ಖಿಂಡ, ಸಾವ ಸಾವ ಸಾವಕಾಶವಾಗಿ ಬೆಳೆದು, ಅಲ್ಲಾಡತೊಡಗಿ, ಕಡೆಗೊಮ್ಮೆ ಕಿವಿಗೆ ಮುಚ್ಚಳವೇ ಆಗಿ, ಬೇಕೆಂದಾಗ ತೆರೆದುಕೊಂಡು, ಬೇಡವೆನಿಸಿದಾಗ ತಟಕ್ಕನೆ ಮುಚ್ಚಿಕೊಳ್ಳುವ ಮಾಂಸ ಕವಾಟವಾಗುವುದರಲ್ಲಿ ನನಗೆ ಏನೇನೂ ಸಂದೇಹವಿಲ್ಲ. ಇದರ ಬಗ್ಗೆ ಮೊನ್ನೆ ಅಮಾವಾಸ್ಯೆ ಶನಿವಾರ ಮುಂಜಾನೆ ನನಗೊಂದು ಕನಸು ಕೂಡ ಬಿದ್ದಿದೆ. ಆದರೆ ಇಷ್ಟೆ. ಈ ಸೌಲಭ್ಯ ಹೊಂದಲು ಮಾನವ ಇನ್ನೂ ಸ್ವಲ್ಪ ಕಾಯಬೇಕಾಗುತ್ತದೆ. ಕೇವಲ ತೊಂಭತ್ತನಾಲ್ಕು ದಶ ಲಕ್ಷ ಸಂವತ್ಸರಗಳು ಅಷ್ಟೆ. ಇದನ್ನು ವಿವರವಾಗಿ ವಿಸ್ತರಿಸಿ ಹೇಳುವ ಅವಶ್ಯಕತೆ ಇದೆ. ಎಂದೊಡನೆ, 13 ಮಂದಿಯ ಆ ಸಭೆ 1300 ಮಂದಿಯಷ್ಟು ಗಲಭೆಮಾಡುತ್ತ ಬೇಡ, ವಿವರ ಬೇಡ. ವಿಸ್ತರಿಸಕೂಡದು. ನಿಲ್ಲಿಸಿ, ಇಳಿಯಿರಿ, ಕುಕ್ಕರಿಸಿ. ಉಪಾಹಾರಕ್ಕೆ ತಡವಾಯಿತು ಎಂದು ರಂಪ ಮಾಡಿತು.

ಆ ಅಪಸ್ವರಗಳ ಆರ್ಭಟದಿಂದಾಗಿ ಕೆಟ್ಟ ಕಿವಿ ಶೂಲೆ ಎದ್ದುದರಿಂದ, ಕಾರ್ಯ ದರ್ಶಿಯ ಕಣ್ಣು ತಪ್ಪಿಸಿ, ಕೂತಂತೆಯೇ ಕಾಲಾಡಿಸುತ್ತ, ಹಿಂದಿನ ಬಾಗಿಲಿಂದ ಹೊರ ದುಕೊಂಡು "ಬದುಕಿದೆಯಾ ಬಡ ಜೀವವೇ ?" ಎಂದು ದೌಡಾಯಿಸಿದೆ.

ವಂದನಾರ್ಪಣೆ ಮಾಡುವ ಸಲುವಾಗಿ ಮುಖ್ಯ ಅತಿಥಿಯಾದ ನನ್ನನ್ನು ಅಥವ ನಾನಾದ ಮುಖ್ಯ ಅತಿಥಿಯನ್ನು ಕಾರ್ಯದರ್ಶಿ ಕದರಕಡ್ಡಿ ಅವರು ಇನ್ನೂ ಹುಡು ಕಾಡುತ್ತಿದಾರೆ ಅಂತ ವದಂತಿ.



# ಬೋರ್ಡುಗಳು, ಬೋರ್‘ಡು’ಗಳಲ್ಲ

—ಭುವನೇಶ್ವರಿ ಹೆಗಡೆ

---

ನಾನು ಯಾವ ಊರಿಗೇ ಹೋಗಲಿ, ನನಗೆ ಬೋರ್ ಆಗುವದೇ ಇಲ್ಲ. ಯಾಕೆಂದರೆ ಬೋರ್ ಆಗುವಷ್ಟರಲ್ಲಿ ಒಂದಾದರೂ ವಿಚಿತ್ರವಾದ ವಿಪರೀತವಾದ ಬೋರ್ಡು ನನ್ನ ಕಣ್ಣಿಗೆ ಬೀಳದಿರುವುದಿಲ್ಲ. ಒಮ್ಮೆ ನಮ್ಮೂರಿನಿಂದ ಹಾಸನಕ್ಕೆ ಹೊರಟಿದ್ದೆ, ಬಾಣಾವರದಲ್ಲಿ ಒಂದು ಬಿಲ್ಡಿಂಗು ಕಣ್ಣಿಗೆ ಬಿತ್ತು. ಅದಕ್ಕೆ ಹೆಸರು ‘ಮಾವ ಅಳಿಯ’ ಎಂಬುದಾಗಿ ಕೆತ್ತಿದ್ದಾರೆ· ಆದನ್ನ ಮಾವ ಕಟ್ಟಿಸಿ ಅಳಿಯನಿಗೆ ಉಡುಗೊರೆ ಕೊಟ್ಟಿದ್ದಾನೋ, ಅಳಿಯ ಮಾವನ ಆಶ್ರಯದಲ್ಲಿ ಉಳಿದಿದ್ದಾನೋ ತಿಳಿಯಲಿಲ್ಲವಾದರೂ ದಶಮಗ್ರಹವೆಂದೆಲ್ಲ ಪರಿಗಣಿಸಲ್ಪಡುವ ಪೀಡೆಯನ್ನು ಮಾವ ತನ್ನ ಪಕ್ಕದಲ್ಲೇ ಕೆತ್ತಿ ಕೂರಿಸಿಕೊಳ್ಳುವದೆಂದರೇನು ? ಧೈರ್ಯವೋ, ಪ್ರೀತಿಯೋ, ಏನೇ ಆಗಲಿ. ಅಂತೂ ಬಲು ಅಪರೂಪದ್ದೇ ಇದು.

ಹಾಸನ ಬಂದಾಗ ನಮ್ಮ ಬಸ್ಸು ಹಾಸನದ ಡಿಪೋದೊಳಗೆ ಹೋಯಿತು. ಊರು ಬಂದ ಮೇಲೂ ಬಸ್ಸು ಸ್ಟಾಂಡಿಗೆ ಹೋಗದೇ ಡಿಪೋದೊಳಗೆ ನುಗ್ಗಿದ್ದಕ್ಕಾಗಿ ಎಲ್ಲರೂ ಗೊಣಗುತ್ತಿದ್ದರು. ಬಸ್ಸಿನ ಯಾವುದೋ ಮೈನರ್ ಪಾರ್ಟು ಕೆಟ್ಟಿದೆ. ಬೆಳಿಗ್ಗೆ ರಿಪೇರಿ ಮಾಡೋವರು ಯಾರೂ ಸಿಗಲ್ಲ. ಈಗ್ಲೇ ಮಾಡಿಸ್ಬೇಕು ಎಂಬುದು ಡ್ರೈವರ್‌ನ ವಾದ· ಡಿಪೋದಲ್ಲಿ ಕುಳಿತವರೋ ? ಬಸ್ಸುಗಳೆಂದರೇ ಅಲರ್ಜಿಯೆಂಬಂತೆ ಕುಳಿತಿದ್ದಾರೆಯೇ ವಿನಹ ಕದಲುತ್ತಿಲ್ಲ. ಡ್ರೈವರ್ ಪಾಪ ಅತ್ತಿಂದಿತ್ತ ಓಡಾಡುತ್ತಿದ್ದರೂ ಯಾರೂ ಬರುತ್ತಿಲ್ಲ. ಬೋರ್ ಆಗಲು ಪ್ರಶಸ್ತ ಸಮಯ. ಉಹೂಂ, ಆಗಲೇ ಇಲ್ಲ. ಬೋರ್ಡ್ ಒಂದು ಕಣ್ಣಿಗೆ ಬಿತ್ತು, ಅಲ್ಲೇ ಮೇಜೊಂದರ ಮೇಲೆ ತಲೆಯಿಟ್ಟು ನಿದ್ರಿಸುತ್ತಿದ್ದಾತನ ಮೇಲ್ಗಡೆಯೇ ಆ ಬೋರ್ಡು ಇತ್ತು.

Don’t sit like a rock.
Work like a clock.

(ಕಲ್ಲಿನಂತೆ ಕೂತಿರಬೇಡ. ಗಡಿಯಾರದಂತೆ ಕೆಲಸ ಮಾಡು.)

ದುರದೃಷ್ಟವಶಾತ್ ಆ ಟೇಬಲ್ಲಿನ ಮೇಲೆ ತಲೆಯೂರಿ ಕುಳಿತಾತ ದಪ್ಪಗೆ ಕಲ್ಲಿನಂತೇ ಇದ್ದ. ನಾನು ಸುಮ್ಮನಿರಲಾರದೇ ನನ್ನೆದುರಿನ ಸೀಟಲ್ಲಿ ಕೂತ ಇಬ್ಬರು ಹುಡುಗರಿಗೆ ಈ ವಿಚಿತ್ರವನ್ನು ತೋರಿಸಿಬಿಟ್ಟೆ. ಸರಿ, ಶುರುವಾಯಿತು. ಬೋರ್ಡನ್ನು

ಜೋಷ್ಠಾಗಿ ಓದುವುದು, ಆತನನ್ನು ನೋಡುವುದು, ನಗುವುದು. ಅದೊಂದು ವಿನೋದವೇ ಆಗಿ ಇಡೀ ಬಸ್ಸಿಗೆ ಹಬ್ಬಿತು. ನಮ್ಮ ಗೊಣಗುವಿಕೆಗೂ, ಬೈಗುಳಕ್ಕೂ ಸಿಟ್ಟಿಗೆದ್ದು ಮೇಲೇಳದ ಆತ ನಮ್ಮ ನಗುವಿನಿಂದ ಅವಮಾನಿತನಾಗಿ ಮೇಲೆದ್ದ ಹಾಗೂ ಕೆಲಸವಾಯಿತು. ಸಿಟ್ಟಿಗಿಂತಲೂ ನಗು ಶಕ್ತಿಶಾಲಿ ಎಂಬ ಬೋರ್ಡನ್ನು ಎಲ್ಲಾದರೂ ಬರೆಸಿಹಾಕಬೇಕೆಂದು ಅವತ್ತೇ ನಾನು ನಿರ್ಧರಿಸಿದೆ.

ನೀವೇನಾದರೂ ಮಂಗಳೂರಿಗೆ ಬಂದಿರೋ ನಿಮ್ಮಲ್ಲಿರುವ 'ಅ'ಕಾರಗಳನ್ನೆಲ್ಲ 'ಓ'ಕಾರಗಳನ್ನಾಗಿ ಪರಿವರ್ತಿಸಿ ಕೊಂಡಿರಾದರೇ ಕ್ಷೇಮ. 'ಜನ ಅಡ್ಡಿಲ್ಲ ಮಾರಾಯ್ರೆ ಎನ್ನಿಸಿಕೊಳ್ಳಬಹುದು. ಇಲ್ಲಿ ನಿಮಗ ಸಾ ಮಿಲ್ಲು ಕಾಣಲಾರದು. ಸೋ ಮಿಲ್ಲು ಬೇಕಾದರೆ ಇದೆ. ಬ್ಯಾಟರಿ ಎಂದರೆ ಇಲ್ಲಿಯ ಜನ ತುಳುವಿನಲ್ಲಿ ನಕ್ಕಾರು ಬೇಟರಿ ಎನ್ನಬೇಕು. ಬೇಂಕು (Bank) ಎಂದರೆ ಖುಷಿಪಟ್ಟಾರು. ಇಲ್ಲಿ ಲೋರಿಗಳನ್ನು ತೊಳೆಯುತ್ತೇವೆ ಎಂಬ ಬೋರ್ಡಿನಡಿಗೆ ನಿಮ್ಮ ಲಾರಿಯನ್ನು ನಿಲ್ಲಿಸಿ ತೊಳೆಸಬಹುದು. ಆದರೆ ನನ್ನ ಗ್ರಹಚಾರಕ್ಕೆ 'ಇಲ್ಲಿ ಲೋರಿಗಳು ತೊಳೆಯುತ್ತವೆ' ಎಂಬ ಬೋರ್ಡು ಕಣ್ಣಿಗೆ ಬೀಳಬೇಕೇ ? ಯಾರನ್ನಿರಬಹುದು ಎಂದು ಕೇಳುವದಾದರೂ ಯಾರನ್ನು ?

ಇದಾದರೂ ಅಷ್ಟು ಕಷ್ಟದ ಕೆಲಸವಲ್ಲ. ಆದರೆ ಚಿತ್ರದುರ್ಗದ ಜನ ಮಾತ್ರ 'ಹ' ಮತ್ತು 'ಅ'ಕಾರಗಳ ತಮ್ಮ ಪರಂಪರಾನುಗತ ಪಲ್ಲಟವನ್ನು ಈಗಲೂ ಚಾಚೂ ತಪ್ಪದೇ ಅನುಸರಿಸುತ್ತಿದ್ದಾರೆ. ಹಕ್ಕಿಯನ್ನು ಅಕ್ಕಿ ಎಂತಲೂ ಅನ್ನವನ್ನು ಹನ್ನ ಎಂತಲೂ ಹೇಳುವ ಕಷ್ಟವನ್ನು ಯಾಕೆ ಅವರು ಪಡಬೇಕೆಂಬುದೇ. ನನಗೆ ಅರ್ಥವಾಗಿಲ್ಲ. ಹೊಟೆಲ್ ಹರ್ಷವರ್ಧನ್‌ದಲ್ಲಿ ಊಟ ಮಾಡಿ ಬಂದ ನೀವು "ಓಟೇಲ್ ಅರ್ಷವರ್ಧನ್‌ದಲ್ಲಿ ಉಂಡೆ ಕಣ್ಲಾ ಎನ್ನಬೇಕು.

'ಇಲ್ಲಿ ಹರಿಷಿಣ ಮಾರುತ್ತೇವೆ' 'ಅಳ್ಳಕ್ಕೆ ದಾರಿ' 'ಆಸಿ ಸೌದೆ ಸಿಗುತ್ತದೆ' 'ಹೆಮ್ಮೆ ಆಲು ಸಿಗುತ್ತಗೆ'............ಇಂಥ ಅಸಂಖ್ಯಾತ (ಅಲ್ಲ ಹಸಂಖ್ಯಾತ) ಬೋರ್ಡುಗಳು ನಿಮಗಲ್ಲಿ ಕಾಣುತ್ತವೆಯಾದ್ದರಿಂದ ಸ್ಥಳ ಸಂದರ್ಭಗಳನ್ನನುಲಕ್ಷಿಸಿ ಹಕಾರಗಳನ್ನು ಅಕಾರಗಳನ್ನಾಗಿಯೂ, ಅಕಾರಗಳನ್ನು ಹಕಾರಗಳನ್ನಾಗಿಯೂ ನೀವೇ ಪರಿವರ್ತಿಸಿಕೊಂಡರೆ ನೀವು ಹೃದಯವಂತರು. (ನನಗೀ ಶಬ್ದದ ಅಕಾರ ರೂಪ ಬರೆಯಲು ಬರುತ್ತಿಲ್ಲ, ಕ್ಷಮಿಸಿ.)

ಒಮ್ಮೆ ಚಿತ್ರದುರ್ಗದ ಹಳ್ಳಿಯೊಂದರ ಶಾಲೆಗೆ ಹೋಗುವ ಅವಕಾಶ ಸಿಕ್ಕಿತ್ತು. ಶಾಲೆಯ ಅಂಗಳದಲ್ಲಿ ಮರದ ಕೆಳಗೆ ರಟ್ಟಿನ ಮೇಲೆ ಬರೆದ ಬೋರ್ಡೊಂದನ್ನು ಸಿಕ್ಕಿಸಿದ್ದರು. 'ಹೀ ಓಲಿನಲ್ಲಿ ಅವು ಒಕ್ಕಿರುತ್ತದೆ, ಉಡುಗರು ಒರಗಡೆ ಉಶಾರಾಗಿ ಹೋಡಾಡಬೇಕು.

ಎರಡು ಮೂರು ಸಲ ಓದಿದರೂ ಅರ್ಥವಾಗದೇ ಅಲ್ಲಿದ್ದ ಸಣ್ಣ ಹುಡುಗ ನೋರ್ವನ ಬಳಿ ನಾಚಿಕೆ ಬಿಟ್ಟು ಅದರರ್ಥ ಕೇಳಿ ತಿಳಿದುಕೊಂಡೆ. "ಅಲ್ಲಿ ನಾಗ್ರಾವು ಒಕ್ಕಂಡ್ಯೆತ್ರೀ" ಎಂದು ಆ ಮರಿ ಹೇಳುತ್ತಾ ನನ್ನನ್ನು ನೋಡಿ ಓದಲು ಬಾರ ದವಳು ಎಂಬಂತೆ ಮುಖ ಮಾಡಿದ.

ಹೊಟೆಲ್ಲುಗಳಿಗೆ ದೇವರ ಹೆಸರು ಇಟ್ಟು ಇಟ್ಟೂ ಲಾಭ ಮಾಡುವವರು ಹಲ ವರು. ಆದರೆ ಹೊನ್ನಾವರದ ಬಳಿ. ಹೈವೇ ಮೇಲೆ 'ಹೊಟೆಲ್ ದೇವರೇ ಗತಿ' ಎಂಬ ಬೋರ್ಡೊಂದು ತಲೆ ಎತ್ತಿ (ತಗ್ಗಿಸಿ!) ನಿಂತಿದೆ. ಆ ಹೊಟೆಲ್ಲಿನ ಒಳಗೆ ನಾನಿನ್ನೂ ಹೋಗಲಿಲ್ಲವಾದ್ದರಿಂದ ಅದು ಮಾಲಿಕರ ಉದ್ಗಾರವೋ, ಉಂಡು ಹೊರಬೀಳು ವವರ ಉದ್ಗಾರವೋ ತಿಳಿದಿಲ್ಲ. ಆದರೂ ಈ ಬೋರ್ಡು ತನ್ನ ಸರ್ವಾರ್ಪಣ ಭಾವ ದಿಂದ ನನ್ನ ಹೃದಯವನ್ನು ಕಲಕಿದ್ದು ನಿಜ. ಅಂತೆಯೇ ಮುಂಡಗೋಡಿನಲ್ಲಿ "ಕ್ರಿಸ್ತನ ಪ್ರೀತಿಯ ಆಸ್ಪತ್ರಿ" ಎಂಬ ಬೋರ್ಡೊಂದಿದೆ. ಬಹುಶಃ ಆ ಆಸ್ಪತ್ರೆಯವರಿಗೆ ಹಿಂದೂಗಳ 'ದೇವರಿಗೇ ಪ್ರೀತಿ' ಎಂಬ ಪ್ರಯೋಗ ಗೊತ್ತಿದ್ದರೆ ಹಾಗೆ ಬರೆದು ಕೊಳ್ಳುವ ಧೈರ್ಯ ಮಾಡುತ್ತಿರಲಿಲ್ಲವೇನೋ.

ನೀವೇನಾದರೂ ಧಾರವಾಡ ಹುಬ್ಬಳ್ಳಿ ಪ್ರಾಂತಕ್ಕೆ ಕಾಲಿಟ್ಟಿರೋ ಅಸಂಖ್ಯಾತ ಬೋರ್ಡುಗಳು ತಮ್ಮ ಭಾವವಾಚಕ ಹೆಸರುಗಳಿಂದ ನಿಮ್ಮ ಮನ ಸೂರೆಗೊಳ್ಳು ತ್ತವೆ. ಮನರಂಜಿಸುತ್ತವೆ. ಹುಬ್ಬಳ್ಳಿಯ ನಾಲ್ಕಂತಸ್ತಿನ ಕಟ್ಟಡವೊಂದರ ಮೊದಲ ಕೆಳಭಾಗದಲ್ಲಿಯೇ ಡಾ॥ ಮೇಲ್ಮಾಳಗಿ ಅವರ ಬೋರ್ಡು ಕಣ್ಣಿಗೆ ಬೀಳುತ್ತದೆ. 'ಮೇಲ್ಮಾಳಗಿ' ಅವರ ಅಡ್ಡ ಹೆಸರಾದ್ದರಿಂದ ಉದ್ದಕ್ಕೆ ಮಾಳಿಗೆಯನ್ನು ಹತ್ತಬೇಕಿಲ್ಲ ವೆಂಬುದು ನಿಮ್ಮ ಸುದೈವ. ಆದರೆ ನನಗೆ ಸಿಕ್ಕಾಪಟ್ಟೆ ನಗು ಬಂದಿದ್ದು ಧಾರವಾಡ ದಲ್ಲಿ ಡಾ॥ ಧಡೂತಿ ಎಂಬ ಬೋರ್ಡೊಂದರ ಎದುರು ನಿಂತಿದ್ದಾಗ. ಆ ಬೋರ್ಡಿ ನಡಿಯ ಬಾಗಿಲ ಒಳಗೆ ಹಣಕಿದಾಗ ಡಾಕ್ಟರ ಎಂಬ ಫಲಕದ ಕೆಳಗೆ ಕಡ್ಡಿಯಂಥ ದೇಹವೊಂದು ಕುಳಿತಿತ್ತು ! ನೀವು ಅಲ್ಲ ಉಳಿಯಬೇಕಾದ ಪ್ರಸಂಗ ಬಂದರೆ ಡಾ॥ ಅಂಟಿನ ಅವರನ್ನೂ ಭೆಟ್ಟಿಯಾಗಬಹುದು. ಪ್ರೊ॥ ಜೋಳದ ರೊಟ್ಟಿ, ಮಿಸ್ ಉಳ್ಳಾಗಡ್ಡಿ, ಎಡ್ವೋಕೇಟ ಸಣ್ಣಕ್ಕನವರು (ಗಂಡು ಹೆಸರು ನೆನಪಿರಲಿ)......... ಇಂಥ ಎಷ್ಟೋ ಬೋರ್ಡುಗಳೊಂದಿಗೆ ವ್ಯವಹರಿಸಬೇಕಾಗಬಹುದು.

ಆದರೆ ಮನೆಗಳಿಗೆ ಹೆಸರನ್ನಿಟ್ಟುಕೊಳ್ಳುವುದು ಅವರವರ ಇಷ್ಟ ತಾನೆ ? ಹಿಂದೂಗಳಿಗೆ ಮಾತೃ ಕೃಪಾ ಪಿತೃ ಕೃಪಾ ಇದ್ದ ಹಾಗೆ ಮುಸ್ಲಿಮರಿಗೆ ಹುಸೇನವಿಲ್ಲಾ ಫಾತಿಮಾವಿಲ್ಲಾ ಇತ್ಯಾದಿ ಇಡುತ್ತಾರಷ್ಟೆ ? ಪುಣೆಯಲ್ಲೊಬ್ಬ ಮುಸ್ಲಿಂ ಬಾಂಧವರು ಚಂದದ ತಮ್ಮ ಮನೆಗೆ 'ಸುಂದರವಿಲ್ಲಾ' ಎಂಬುದಾಗಿ ಬೋರ್ಡು ಬರೆಸಿದ್ದರಂತೆ. ಬೋರ್ಡನ್ನು ಒಪ್ಪಿಕೊಳ್ಳಲಾರದ ಯಾರೋ ಅದರ ಕೆಳಗೆ 'ಆದರೂ ಪರವಾಯಿಲ್ಲ' ಎಂದು ಬರೆದಿಟ್ಟರಂತೆ.

ಈಗಿನ 'ಇಲ್ಲ'ಗಳ ಪರಿಸ್ಥಿತಿಯಲ್ಲಿ ಹಿಂದೂಗಳೂ ಸಹ ಈ ವಿಲ್ಲಾಗಳ ಬೋರ್ಡುಗಳನ್ನು ತಮ್ಮ ಮನೆಗಳಿಗೆ ಇಟ್ಟುಕೊಂಡರೆ ಹೆಚ್ಚು ಅರ್ಥಪೂರ್ಣ ವಾದೀತು. 'ಉದಕ ವಿಲ್ಲಾ' 'ದೀಪ ವಿಲ್ಲಾ' 'ಸಂಭ್ರಮ ವಿಲ್ಲಾ' 'ಸಂತೋಷ ವಿಲ್ಲಾ' ಎಂದು ನಿರಾಶಾವಾದಿಗಳೂ 'ಸಂತಾಪ ವಿಲ್ಲಾ' 'ಬಾಧಕ ವಿಲ್ಲಾ'... ಹೀಗ ಆಶಾವಾದಿ ಗಳೂ ಇಟ್ಟುಕೊಳ್ಳಬಹುದು. ನಾನಂತೂ ಮನೆ ಕಟ್ಟಿದ್ದೇ ಆದರೆ ಜನಜಂತುಗಳು ಬಂದು ಉಳಿದು, ಹಳಿದು ಮಾಡಬಾರದೆಂಬ ಮುಂದಾಲೋಚನೆಯಿಂದ ನನ್ನ ಮನೆಗೆ 'ಆಶ್ರಯ ವಿಲ್ಲಾ' ಎಂದೊಂದು ಬೋರ್ಡು ನೇತಾಡಿಸಿ ಹಿಂದೂ–ಮುಸ್ಲಿಂ ಬಾಂಧವ್ಯದ ಪ್ರವರ್ತಕಳಾಗಬೇಕೆಂದು ತೀರ್ಮಾನಿಸಿ ಬಿಟ್ಟಿದ್ದೇನೆ.

ಘೋಷಣೆಯನ್ನು ಪ್ರತಿಭಟಿಸುವ ಶಕ್ತಿ ಜನರಲ್ಲಿ ಕಡಿಮೆಯಾಗುತ್ತಿದೆ: ಪ್ರಚಾರ ಹೇಳಿಕೆ

— ಸುದ್ದಿ



ಇಲ್ಲಿರುವುದನ್ನೆಲ್ಲಾ ಇವರೇ ತಿಂದ್ರೆ ನಮಗೆ
ಹ್ಯಾಗ್ರಿ ಶಕ್ತಿ ಬರೋದು......ಮತ್ತೇ......
ನಾವು ಹ್ಯಾಗ್ರಿ ಪ್ರತಿಭಟಿಸೋದು !

# ಹೈಸ್ಕೂಲ್ ದಿನಗಳು

—ಶಿವು

---

ವರ್ಣಾಶ್ರಮ ಧರ್ಮದೊಂದಿಗೆ ನನ್ನ ಪ್ರಥಮ ಸಮಾಗಮ ಹೈಸ್ಕೂಲಿನಲ್ಲಿ. ಅಂದಿನ ವಿದ್ಯಾರ್ಥಿ ವೃಂದದಲ್ಲಿ ನಾಲ್ಕು ಜಾತಿಗಳು. (೧) ಮಹಾಕುಡುಮಿಗಳು (೨) ಕವಿಗಳು (೩) ಹಿಂದಿನ ಬೆಂಚಿನವರು ಮತ್ತು (೪) ಇತರರು. ಅಧಿಕಾರ ಚಲಾವಣೆಯಲ್ಲಿ ಅಗ್ರ ಸ್ಥಾನ ಹಿಂದಿನ ಬೆಂಚಿನವರಿಗೆ. ಕವಿಗಳೆಲ್ಲಾ ಮಾತುಗಾರರು. ಮಹಾ ಕುಡುಮಿಗಳದ್ದೇ ಒಂದು ಬೇರೆ ಪಂಗಡ. ಇತರ ಪಾಮರರೊಡನೆ ಬೆರೆಯುತ್ತಿರಲಿಲ್ಲ. ಎಲ್ಲರಿಗೂ ಸೊಪ್ಪು ಹಾಕುವ ನಾವು ಸೈಲೆಂಟ್ ಮೆಜಾರಿಟಿ.

ಒಮ್ಮೆ ರೆಸಿಟೇಷನ್ ಸ್ಪರ್ಧೆ. ಮಹಾ ಕುಡುಮಿ ರಾಮ ಪ್ರಿಯ. "MEN ! **Who boast it is that ye, Sons of fathers bold & free..........**" ಎಂದು ಪ್ರಾರಂಭವಾಗುವ ಇಂಗ್ಲೀಷ್ ಕವನವೊಂದನ್ನು ಮೂರು ದಿನಗಳಿಂದ ಹಗಲೂ ರಾತ್ರಿ ಬಾಯಿ ಪಾಠ ಮಾಡಿಕೊಂಡಿದ್ದ. ಸ್ಪರ್ಧೆ ಮಧ್ಯಾಹ್ನ ಎರಡು ಘಂಟೆಗೆ ಮಹಡಿಯ ಮೇಲಿನ ಸಭಾಂಗಣದಲ್ಲಿ ಸೈಲೆಂಟ್ ಮೆಜಾರಿಟಿಯನ್ನು ದಬ್ಬಿ ತುಂಬಿದ್ದರು. ಸ್ಪರ್ಧೆಯಲ್ಲಿ ಬಹುಮಾನ ಪಡೆಯಬೇಕಾದರೆ ಜೋರಾಗಿ. ಭಾವಪೂರ್ಣತೆಯಿಂದ, ಹೇಳಿದರೆ ಮಾತ್ರ ಸಾಧ್ಯ ಅಂತ ರಾಮ ಪ್ರಿಯನಿಗೆ ಯಾರೋ ಊದಿ ಬಿಟ್ಟಿದ್ದರು. ಅಂದು ಅವನದ್ದೇ ಮೊದಲ ರೆಸಿಟೇಷನ್. ಹಾಲಿನಲ್ಲಿ ಹುಡುಗರ ಗಿಜಿಗಿಜಿ. ಒಮ್ಮೆಲೇ ರಾಮ ಪ್ರಿಯ ವೇದಿಕೆಯ ಮೇಲಕ್ಕೆ ಓಡಿ ಬಂದ. ಆವೇಶ ಬಂದವನಂತೆ "**MEN !**" ಅಂತ ಸೂರು ಕಿತ್ತುಹೋಗುವ ಹಾಗೆ ಕೂಗಿದ. ಥಟ್ಟನೆ ಸ್ವಿಚ್ ಆರಿಸಿದಂತೆ ಗಿಜಿಗಿಜಿ ನಿಂತಿತು. ರಾಮ ಪ್ರಿಯನ ಎಲ್ಲ ಶಕ್ತಿಯೂ ಮೊದಲ ಸಂಬೋಧನೆಯಲ್ಲೇ ಕರಗಿ ಹೋಯಿತೋ ಏನೋ ? ಅವನ ಬಾಯಿಂದ ಮುಂದಿನ ಪದಗಳು ಹೊರ ಹೊಮ್ಮಲೇ ಇಲ್ಲ. ಜ್ಞಾಪಿಸಿಕೊಳ್ಳಲು ಮಾಡಿದ ಯತ್ನವೆಲ್ಲಾ ವ್ಯರ್ಥ. ಪುನಃ ಮೊದಲಿನಿಂದ ಹೇಳಿದರೆ ಜ್ಞಾಪಕ ಬರಬಹುದೆಂಬ ಆಸೆಯಿಂದ ಮತ್ತೊಮ್ಮೆ "**MEN ! !**" ಎಂದು ಕೂಗಿದ. ಆದರೂ ಆ ಕೂಗಿನಲ್ಲಿ ಹಿಂದಿನ ಆವೇಶವಿರಲಿಲ್ಲ. ಸಭೆಯಲ್ಲಿ ನೀರವತೆ. ಅಲ್ಲಿದ್ದ **V. R. D.** ಮೇಷ್ಟರು, ಕನಿಕರದಿಂದ **who boast** ...... ಅಂತ ಪ್ರಾಂಪ್ಟ್ ಮಾಡಿದರು. ಅಷ್ಟು ಹೊತ್ತಿಗಾಗಲೇ ರಾಮ ಪ್ರಿಯನ ಉತ್ಸಾಹವೆಲ್ಲಾ ತಣ್ಣಗಾಗಿದ್ದರಿಂದ, ಕವನ ಮುಗಿಸದೇ ವೇದಿಕೆ

ಇಳಿದು ಬಂದ. ಮಹಾ ಕುಡುಮಿಗೆ ಆದ ತೇಜೋವಧೆ ಕಂಡು ನಮಗೆಲ್ಲಾ ಖುಷಿಯೋ ಖುಷಿ. ನನ್ನ ಸಹಪಾಠಿ ಚೆಲುವ ಮಾತ್ರ ಅವತ್ತೆಲ್ಲಾ "ಅವನ್ಯಾಕಂಗ್ ಕೂಗ್ದ ?" ಅಂತ ಕೇಳ್ತಾನೇ ಇದ್ದ.

ಬಂಗಾರ ಸ್ವಾಮಿ ಕವಿ. ಒಮ್ಮೆ ಮಧ್ಯಾಹ್ನ ಸ್ಕೂಲಿನ ಕಾಂಪೌಂಡ್ ಹೊರಗೆ ಸ್ವಲ್ಪ ದೂರದಲ್ಲಿ ಇದ್ದ ಹೋಟಲಿನ ಮುಂದೆ ನಾವೆಲ್ಲಾ ಮುಖ ಒಣಗಿಸುತ್ತಾ ನಿಂತಿದ್ದೆವು ಕಾರಣ, ಹೋಟಲಿನ ರೇಡಿಯೋದಿಂದ ಹೊರ ಹೊಮ್ಮುತ್ತಿದ್ದ ಕ್ರಿಕೆಟ್ ಕಾಮೆಂಟ್ರಿ. ಅಧಿಕಾರಿ. ಫಡ್ಕರ್, ಮಂಕಡ್‌ಗಳ ಕಾಲ. ಅರ್ಥವಾಗಲೀ ಬಿಡಲಿ, ಕಾಮೆಂಟ್ರಿ ಕೇಳೋರ ಗುಂಪಿನಲ್ಲಿ ನಿಲ್ಲೋದೇ ಒಂದು ಹೆಗ್ಗಳಿಕೆ. ಯಾರಾದ್ರೂ ದೊಡ್ಡೋರು ಅಲ್ಲಿ ನಿಂತ್ರೆ ಅವರ್ನ ಮೆತ್ಗೆ ಸ್ಕೋರೆಷ್ಟು ? ಅಂತ ಕೇಳಿ ತಿಳಿದು ನಮ್ಮ ಕ್ರಿಕೆಟ್ ಕುತೂಹಲ ತಣಿಯಬೇಕಾಗಿತ್ತು. ಅಂದು ಮಧ್ಯಾಹ್ನ ನಿಂತಿದ್ದ ಗುಂಪಿನಲ್ಲಿ ಬಂಗಾರಸ್ವಾಮಿಯೂ ಇದ್ದ. ಸ್ಟೇಷನ್ ಬದಲಿಸಿದ್ದರಿಂದಲೋ ಏನೋ ರೇಡಿಯೋ ದಿಂದ ಕಾಮೆಂಟ್ರಿ ಬದಲು "ಓ,ಓ,ಓ,ಓ, ವಸಂತ ಮಾಸ ಓಡಿ ಬಂದಿದೆ.......... ಅಂತ ಜನಪ್ರಿಯ ಹಾಡೊಂದು ತೇಲಿ ಬಂತು. ಬಂಗಾರಸ್ವಾಮಿ ಒಮ್ಮೆಲೆ ನನ್ನನ್ನು ಗುಂಪಿನ ಗೊಂಚಲಿನಿಂದ ಬಿಡಿಸಿ ದೂರಕ್ಕೆ ಎಳೆದುಕೊಂಡು ಹೋದ. ಎಳೆದ ರಭಸವನ್ನು ನೋಡಿಯೇ ನನಗೆ ಸ್ವಲ್ಪ ಗಾಭರಿ ಆಯಿತು. "ಬಿಟ್ಬಿಡೋ! ಅಂತ ಅಂಗಲಾಚಿದೆ. ಅವ "ಓ,ಓ,ಓ,ಓ, ಸ್ವತಂತ್ರ ಮಾತೆ, ಓಡಿ ಬನ್ನಿರಿ!........." ಅಂದು "ಹೇಗಿದೆ ಕವನ ?" ಅಂತ ಕೇಳಿದ. "ಚೆನ್ನಾಗಿದೆ" ಅಂದು ಕ್ಲಾಸಿಗೆ ಓಡಿದೆ. ಅನ್ನಿ.

ಇನ್ನೊಬ್ಬ ಚೋಟಿ ಕವಿ ಸಂತಾನಂ. ಕೆಮಿಸ್ಟ್ರಿ ಪ್ರಾಕ್ಟಿಕಲ್ ಹಾಲಿನಲ್ಲಿ ಇವ್ನ ಒಮ್ಮೆ ದರ್ಬಾರ್ ನಡೆಸಿದ್ದ. ಅಂದು ಕೆಮಿಸ್ಟ್ರಿ ಮೇಷ್ಟ್ರು B T.K. (ಬಿ. ಟಿ. ಕೃಷ್ಣಮಾಚಾರ್—ಅಣುಬಾಂಬ್ ಖ್ಯಾತಿ !) ಬಂದಿರಲಿಲ್ಲ. ಮಾನಿಟರ್ ರಾಮು ಪ್ರಿಯ ಸಹಾ ರಜಾ. ನಾವೆಲ್ಲಾ ಸಂತಾನಂ ಸುತ್ತ. ಮೇಷ್ಟ್ರುಗಳನ್ನೆಲ್ಲಾ ಅವರ ಇನಿಷಿಯಲ್ಸ್ ನಿಂದ ಕರೆಯೋದು ಅಂದಿನ ಪರಿಪಾಠ. B T.K., N.N. (ಎನ್. ನಾಗರಾಜ್) C.K.S (ಸಿ. ಕೆ. ಶೇಷಾದ್ರಿ), S.N. (ಎಸ್ ನಾರಾಯಣ ರಾವ್), B.S N. (ಬಿ. ಎಸ್. ನರಸಿಂಹನ್), K.K (ಕೆ. ಕೃಷ್ಣರಾವ್) ಇವರೆಲ್ಲಾ ನಮ್ಮ ಗುರು ಸಮೂಹ.

ನಮ್ಮ ಮಾತುಕತೆ ಮೇಷ್ಟ್ರುಗಳ ಕಡೆ ಹೊರಳಿತು. ಯಾರೋ B T.K. ಒಂದು ವಾರ ಬರೋಲ್ಲವಂತೆ ಅಂದರು. ಸಂತಾನಂ "B.T.K ಅಂದ್ರೆ ಏನು ಗೊತ್ತೇನ್ರೊ ?" ಅಂತ ಕೇಳಿದ. ನಾವೆಲ್ಲಾ ಒಕ್ಕೊರಲಿನಿಂದ "ಇಲ್ಲ" ಅಂದೆವು. ಸಂತಾನಂ "ಬೋಳು ತಲೆ ಕುಳ್ಳ" ಅಂತ ಹೇಳಿ ಜೋರಾಗಿ ನಕ್ಕ. ಎಲ್ಲರಿಗೂ ಖುಷಿ. ಬಿರುದು ಅನ್ವರ್ಥವಾಗಿದ್ದು ಹೆಚ್ಚಿನ ಸಂತಸ ತಂದಿತ್ತು.

"V.R.D. ಅಂದ್ರೇನೋ ! "ಇನ್ನೊಂದು ದನಿ.

"ವದ್ದರೆ ರಗಳೆ ಮಾಡೋ ದೊಣ್ಣೆ !" ಸಂತಾನಂ ಒಳ್ಳೆ ಫಾರಂನಲ್ಲಿದ್ದ.

"N.N. "ನ್ಯಾಯವಿಲ್ಲದ ನಾಯಿ" (ನಗು).

"S. N. "ಸ್ನೇಹವಿಲ್ಲದ ನಾಯಿ" (ಯಾಕೋ ನಾಯಿ ಥೀಮ್ ರಿಪೀಟ್ ಆಗ್ತಾ ಇತ್ತು.)

"B.S.N. ?" "ಬಿಳೀ ಸುಳ್ಳು ಹೇಳೋ ನೀಚ"

ಬಿಲ್ಲಿನಿಂದ ಹೊರಟ ಬಾಣಗಳಂತೆ ಸಂತಾನಂನ ಉತ್ತರಗಳು ಪಟಪಟನೆ ಉದುರುತ್ತಿದ್ದವು.

" K.K. ?" ಕೋಳಿ ಕಳ್ಳ ಅಥವಾ ಕರೀ ಕುಳ್ಳ—ಯಾವುದು ಬೇಕಾದ್ರೂ ಆರಿಸಿಕೊಳ್ಳಿ" ಈ ಉತ್ತರಕ್ಕೆ ಯಾವ ವಿಧವಾದ ಪ್ರತಿಕ್ರಿಯೆ ಬರಲಿಲ್ಲ. ಏಕೆಂದರೆ ಸಾಕ್ಷಾತ್ K.K. ಅಲ್ಲಿ ಪ್ರತ್ಯಕ್ಷವಾಗಿದ್ದರು. "K.K.?" ಅಂತ ಕೆಳ್ದೋರು ಅವರೇ. ಸಂತಾನಂ ಅದೃಷ್ಟಕ್ಕೆ ಅವರು ಹಾಸ್ಯಪ್ರಿಯರಾಗಿದ್ದರಿಂದ ಅನಾಹುತವೇನೂ ಆಗಲಿಲ್ಲ.

ನಮ್ಮ ಸ್ಕೂಲಿನಲ್ಲಿ ತಿಂಗಳ ಕೊನೆಯ ಶುಕ್ರವಾರದಂದು ಮಧ್ಯಾಹ್ನ ಮೂರು ಘಂಟೆಗೆ ಕ್ಲಾಸೆಲ್ಲಾ Let-off. ಆದ್ರೆ ಮನೆಗೆ ಹೋಗೋ ಹಾಗಿಲ್ಲ. ಮೂರರಿಂದ ನಾಲ್ಕರವರೆಗೂ ಧರ್ಮ ಗುರುಗಳೊಬ್ಬರಿಂದ, ವಿವಿಧ ಧರ್ಮಗಳ ಬಗ್ಗೆ ಉಪನ್ಯಾಸ. ಬೆಳಗಿನಿಂದ ಪಾಠ ಕೇಳಿ ದಣಿದಿದ್ದ ಹುಡುಗರಿಗೆ. ಸಂಜೆ ಆಟಕ್ಕೆ ಹೋಗುವ ಆತುರ. ಧರ್ಮ ಶ್ರದ್ಧೆ ಎಲ್ಲಿಂದ ಬರಬೇಕು ? ಹೀಗಾಗಿ ಈ ಉಪನ್ಯಾಸಗಳಿಗೆ ಮೇಷ್ಟರುಗಳನ್ನು ಬಿಟ್ಟರೆ ಬೇರೆ ಸಭಿಕರೇ ಇರುತ್ತಿರಲಿಲ್ಲ. ನಮ್ಮ ಹೆಡ್ ಮಾಸ್ಟರ್ ಈ ಖಾಲಿ ಸಂಭಾಗಣಗಳ ಬಗ್ಗೆ ಒಮ್ಮೆ ತೀವ್ರವಾಗಿ ಟೀಕಿಸಿದ್ದರಂತೆ.

ಆ ಶುಕ್ರವಾರ, ಭಗವಾನ್ ಗೌತಮ ಬುದ್ಧನ ಬಗ್ಗೆ ಭೌದ್ಧ ಗುರುಗಳೊಬ್ಬರಿಂದ ಉಪನ್ಯಾಸ. ವಿಷಯ "ಅಹಿಂಸೆ" ಮೂರು ಘಂಟೆಗೆ ಬೆಲ್ಲಾದ ತಕ್ಷಣ ನಾವೆಲ್ಲಾ ಮನೆಗಳಿಗೆ ಓಡಲು ಉದ್ಯುಕ್ತರಾದೆವು. ನಮ್ಮ ಕ್ಲಾಸ್ ಮಹಡಿಯ ಮೇಲಿದ್ದುದರಿಂದ ಒಬ್ಬರನ್ನೊಬ್ಬರು ನೂಕುತ್ತಾ ಮೆಟ್ಟಲಿಳಿಯುತ್ತಿದ್ದ ಹುಡುಗ

ಸ್ತೋಮದ ಹಿಂದೆ ನಾನಿದ್ದೆ. ಇನ್ನೂ ಮೇಲೇ ಇದ್ದುದರಿಂದ ಕೆಳಗೆ ನಡೆಯುತ್ತಿದ್ದ ವಿದ್ಯಮಾನಗಳೆಲ್ಲದರ ವಿಹಂಗಮ ನೋಟ ನನಗೆ ಲಭ್ಯವಾಗಿತ್ತು.

ಶಾಲೆಯ ಕಾರಿಡಾರಿನಿಂದ ಬಲಕ್ಕೆ ತಿರುಗಿದರ ಶಾಲೆಯ ಹೊರ ಬಾಗಿಲು. ಬಾಗಿಲಿನ ಬಳಿ S.N. ಮತ್ತು V.R.D. ಒಂದೊಂದು ಬೆತ್ತ ಹಿಡಿದು ಯಮ ದೂತ ರಂತೆ ನಿಂತಿದ್ದರು. ಓಡುತ್ತಾ ಮೊದಲು ಬಾಗಿಲನ್ನು ಸೇರಿದ ಹುಡುಗ ಶಾಂತ ರಾಜು. ಈ ಗುರುದ್ವಯರ ಉದ್ದೇಶಗಳ ಬಗ್ಗೆ ದಿವ್ಯ ಅಜ್ಞಾನದಿಂದ ಬಾಗಿಲಿ ನಾಚೆ ಹೊರಟ. 'ರಪ್' ಎಂದು ಬೆನ್ನ ಮೇಲೆ ಬಿದ್ದ ಏಟಿನಿಂದ ಚೇತರಿಸಿಕೊಳ್ಳುತ್ತಾ ಸ್ವಲ್ಪ ದೂರದಲ್ಲಿ ನಿಂತಿದ್ದ ಡ್ರಿಲ್ ಮೇಷ್ಟರ ಆಜ್ಞೆಯಂತೆ ಶಾಲೆಯನ್ನು ಬಳಸಿ ಮುಂಭಾಗದಲ್ಲಿನ ಸಭಾಂಗಣಕ್ಕೆ ಹಿಂತಿರುಗಿ ಬಂದ. ಹೊರ ಬಾಗಿಲು ತಿರುವಿ ನಲ್ಲಿದ್ದುದರಿಂದ ಹಿಂದೆ ನುಗ್ಗುತ್ತಿದ್ದ ಹುಡುಗರು ಮುಂದೆ ಕಾದಿದ್ದ ಆಪತ್ತಿನ ಅರಿವಿಲ್ಲದೆಯೇ ಮುನ್ನುಗ್ಗುತ್ತಿದ್ದರು.

ಅತ್ತ ಶಾಲೆಯ ಮುಂದಿನ ಸಭಾಂಗಣದಲ್ಲಿ ಶಾಕ್ಯ ಮುನಿ ಉಪದೇಶ ಮಾಡಿದ ಅಹಿಂಸೆಯ ತತ್ವಗಳ ನಿರರ್ಗಳ ಪ್ರತಿಪಾದನೆ. ಹಿಂದಿನ ಹೊರ ಬಾಗಿಲಿನಲ್ಲಿ ಒನಕೆ ಓಬವ್ವನ ಕಿಂಡಿಯ ಕಡೆ ನುಗ್ಗುತ್ತಿದ್ದ ಯೋಧರಂತೆ ಶಾಲಾ ಹುಡುಗರ ನುಗ್ಗಾಟ. ಬಾಗಿಲಿನಾಚೆ ಓಬಣ್ಣಗಳಿಂದ ವಟುಗಳ ಸುರಿಮಳೆ.

ನೆನಪಿನ ದೋಣಿ, ಸರಿದು ಹೋದ ಅನೇಕ ದಶಕಗಳ ಮಬ್ಬಿನಲ್ಲಿ ಸಾಗಿದ್ದರೂ. ಅಂದು ಕಂಡ ಪಕ್ಷಿ ನೋಟ ಇಂದಿಗೂ ಹಸಿರಾಗಿದೆ.

—o—

ಹಳೆಯ ಕೊರವಂಜಿಯಿಂದ......






—ಟೀಯೆಸ್ಸಾರ್ರಾವ್

ರಾಮು ಬೆಂಗಳೂರಿಗೆ ಅವರ ಕಡೆ ಯಾವುದೋ ಮದುವೆಗಾಗಿ ಬಂದು ನಮ್ಮ ಮನೆಯಲ್ಲೂ ನಾಲ್ಕು ದಿನವಿದ್ದು ಹೋದ. ಹೋದೊಡನೆ ಬಿರುಗಾಳಿ ಯಂತೆ ಪತ್ರ ಬಂತು

ಅಯ್ಯಾ,

ನಾನು ಬೆಂಗಳೂರಿನಲ್ಲೇ ನನ್ನ ರಗ್ಗು ಮರೆತು ಬಂದಿದ್ದೇನೆ. ಮೈಸೂರಿನಲ್ಲಿ ನಾನು ಈ ದಿನ ರೈಲಿಳಿದಾಗ ಏನೋ ಭಾರ ಕಡಿಮೆಯಾದ ಹಾಗೆ ತೋರಿತು. ಏನೂಂತ ನೋಡುವಾಗ 'ರಗ್ಗಿ'ಲ್ಲ ! ಅದು ರೈಲಿನಲ್ಲಿ ಕಳೆದುಹೋಗಿರುವುದಕ್ಕೆ ಕಾರಣವಿಲ್ಲ. ನಿಮ್ಮ ಮನೆಯಲ್ಲೇ ಬಿಟ್ಟಿರಬೇಕು. ದಯವಿಟ್ಟು ತೆಗೆದಿರಿಸು. ಭಾನು ವಾರ ಅದಕ್ಕಾಗಿ ಬಂದು ತೆಗೆದುಕೊಂಡು ಹೋಗುತ್ತೇನೆ. ಅದಿಲ್ಲದೆ ಇರುವುದರಿಂದ ಹೇಗ್ಹೇಗೋ' ಆಗಿದೆ. ಇಂಗ್ಲೀಷಿನಲ್ಲಿ ಹೇಳುವುದಾದರೆ I am not myself. ಬಾಕಿ ವಿಷಯ ಮೊಕ್ತಾ.

ಇತಿ.
ರಾಮು

ನಾನು ಉತ್ತರ ಬರೆಯಬೇಕಾಯಿತು. ಬರೆದೆ.

ಅಯ್ಯಾ ಮನುಷ್ಯ,

ನಿನ್ನ ರಗ್ಗು ಇಲ್ಲೇ ನಿಂತು ಹೋಗಿದೆಯೆಂದು ಬರೆದಿದ್ದೀಯೆ. ರಗ್ಗು ಎಂದರೆ ಕನ್ನಡದಲ್ಲಿ ದುಪಟಿ ತಾನೆ ? ನಿನ್ನ ಪೇಚಾಟದಲ್ಲಿ ನನಗೆ ಪೂರ್ಣ ಸಹಾನುಭೂತಿ ಇದೆಯಾದರೂ ಆ ನಿನ್ನ 'ದುಪಟಿ' ಇಲ್ಲಿಲ್ಲ. ಇದ್ದರೆ ತಕ್ಷಣ ಪತ್ತೆಯಾಗುತ್ತಿತ್ತು. ಮೊನ್ನೆ ಇಲ್ಲಿ ನಿನ್ನ ತಂಗಿಯ ಓರಗಿತ್ತಿಯ ಮದುವೆಯಲ್ಲಿ ಬೀಗರಿಗೂ ನಿಮಗೂ,

ಬಂದವರು ಕೂರಲು ಹಾಸಿದ್ದ ಒಂದು ಭಾರೀ ಗುಡಾರದ ವಿಷಯದಲ್ಲಿ ಕೊಂಚ ರಾದ್ಧಾಂತ ನಡೆದು ಬೀಗರಾತನೊಬ್ಬ ಪನ್ನೀರುದಾನಿ ತೆಗೆದು ಅದರ ಮೇಲೆ ಚೆಲ್ಲಿ ದನಲ್ಲ ! ಅದು ತಾನೆ ನಿನ್ನ ರಗ್ಗು ? ಹಾಗಾದರೆ ಇಲ್ಲಿಲ್ಲ. ನೀನು ಹೊರಟ ಮೇಲೆ ನಮ್ಮ ಮನೆಯಲ್ಲಿ ಹತ್ತಾರು ತಗಣೆ ಸಂಸಾರಗಳು ಅಲ್ಲಲ್ಲಿ ಕಾಣಿಸಿಕೊಂಡು ಸಾಕಷ್ಟು ಹಾವಳಿ ಎಬ್ಬಿಸಿವೆಯಾದ್ದರಿಂದ ಯಾವುದಾದರೂ ಮೂಲೆಯಲ್ಲಿ ನಿನ್ನ 'ರಗ್ಗು' ಅಡಗಿರಬಹುದೋ ಎಂಬ ಗುಮಾನಿಯಿಂದ ಮನೆಯ ಮೂಲೆ ಮೂಲೆ ಎಲ್ಲಾ ತಲಾಷ್ ಮಾಡಿದೆ. ಇಲ್ಲ. ಇದ್ದರೆ ಅದರದೇ ಆದ (ಕ್ಷಮಿಸು, ನಿನ್ನದೇ ಆದ) ಒಂದು ಅಪೂರ್ವ ಗಂಧದಿಂದ ಅದನ್ನು ಪತ್ತೆ ಹಚ್ಚಬಹುದಾಗಿತ್ತು. ದಯವಿಟ್ಟು ಇನ್ನೊಂದು ಸಾರಿ ಜ್ಞಾಪಿಸಿಕೋ. ಎಲ್ಲಿ ಬಿಟ್ಟೆಯೋ ? ಇನ್ನೇನೂ ವಿಶೇಷವಿಲ್ಲ.

ಇಂತು,

ಅವನು ಬಿಡಲಿಲ್ಲ.

ಅಯ್ಯಾ ಪ್ರಾಣಿ

ಅದು ಇಲ್ಲಿಲ್ಲ. ನಾನು ತರಲೇ ಇಲ್ಲ. ನಿಮ್ಮಲ್ಲೇ ಮರೆತು ಬಂದೆ. ಹುಡುಗ ರ್‍ಯಾರಾದರೂ ಆಟವಾಡುವುದಕ್ಕೆ ಎತ್ತಿಟ್ಟಿರಬಹುದು. ನೋಡಿ ತಿಳಿಸು. ಖಂಡಿತಾ ನೀನು 'ಸಿಕ್ಕಿತು' ಅಂತ ಬರೆಯುವ ತನಕ ನನ್ನ ಮನಸ್ಸಿಗೆ ಶಾಂತಿ ಇಲ್ಲ. ನನ್ನ ಸ್ವರ್ವ ಸ್ವವೇ ಇಲ್ಲದಂತಾಗಿ ಮಂಕು ಕವಿತಿದೆ. ಬಾಕಿ ಏನೂ ಇಲ್ಲ.

ಇತಿ
ರಾಮು

**P. S.** ನಿಮ್ಮ ಮನೆಯಲ್ಲಿಲ್ಲದಿದ್ದರೆ, ನಿಮ್ಮಜ್ಜಿ ಮನೆಯಲ್ಲಿ ಒಂದು ದಿನ ಮಲ ಗಿದ್ದೆನಲ್ಲ ಅಲ್ಲಿರಬಹುದು. ದಯವಿಟ್ಟು ಕೇಳು. ಅಂತೂ ಬೆಂಗಳೂರಲ್ಲೇ ಇದೆ ಅದು.

ಅಯ್ಯೋ ಪೀಕಲಾಟವೇ ಅಂತ ಮರು ಗೀಚಿದೆ.

—ಅಯ್ಯಾ ಮಹಾ ಪ್ರಾಣಿ,

ನಿನ್ನ ಕಾಗದ ತಲ್ಪಿತು. ಅಭಿಪ್ರಾಯವಾಗಲಿಲ್ಲ. ನಿನ್ನ ಹಿಂದಿನ ಕಾಗದ ಬಂದೊಡನೆ ಮನೆಯೆಲ್ಲಾ ತಲಾಷ್ ಮಾಡಿದೆ. ನಿನ್ನ ರಗ್ಗು ಅದರಾಣೆ ಇಲ್ಲಿಲ್ಲ. ಮೊನ್ನೆ ನಮ್ಮ ಮನೆಯಲ್ಲಿ ಚಿಕ್ಕದೊಂದು ಕಳ್ಳತನವಾಯಿತು. ನಿನ್ನ ದುಃಖದಲ್ಲಿ ಇದೇನು ಅಂತ ಬರೆಯಲಿಲ್ಲ. ಆ ಕಳ್ಳತನದಲ್ಲಿ ನಿನ್ನ ದುಪಟಿ ಮಾಯವಾಗಿರಬಹು ದೆಂದು ನೀನು ಊಹಿಸಬಹುದು. ಅದು ಅಸಾಧ್ಯ. ಯಾವ ಖದೀಮ ಕಳ್ಳನಿಗೂ ನಿನ್ನ

ದುಪಟಿ ಮೇಲೆ ಕೈ ಮಾಡಲು ಎದೆ ಬಾರದು.

ನಮ್ಮ ಹುಡುಗರು ಆಟಕ್ಕೆ ತೆಗೆದುಕೊಂಡಿರಬಹುದೆಂದು ಬರೆದಿದ್ದೀಯೆ. ಶುದ್ಧ ತಪ್ಪು ಭಾವನೆ. ನಮ್ಮ ಮನೆ ಹುಡುಗರು ಕಂಬಳಿ ಮನೆ ಕಟ್ಟಿ ಆಡುತ್ತಿರುವುದುಂಟು. ಆದರೆ ನಿನ್ನ ರಗ್ಗನ್ನು ಮೂಸಿ ನೋಡುವ ಸಾಹಸಕ್ಕೆ ಕೂಡ ಅವರು ಹೋಗಿಲ್ಲವೆಂಬ ಭರವಸೆ ನನಗಿದೆ. ಸಮಾಧಾನ ತಂಗುಕೊ. ಇನ್ನೊಂದು ಸಾರಿ ತುಟಿ ಕಚ್ಚಿ ಯೋಚಿಸು. ಸಿಕ್ಕುತ್ತೆ.

ನಮ್ಮಜ್ಜಿ ಮನೆಯಲ್ಲಿರಬಹುದೆಂದು ಬೇರೆ ಬರೆದಿರುವೆ. ನಮ್ಮಜ್ಜಿ ಮನೆಗೆ ಮೊನ್ನೆ ಬೆಂಕಿ ಬಿದ್ದು ಮನೆಯಲ್ಲಿದ್ದಬದ್ದದ್ದೆಲ್ಲಾ (ಮನುಷ್ಯರನ್ನು ಬಿಟ್ಟು) ಭಸ್ಮವಾಯಿತು. ಆದ್ದರಿಂದ ನಿನ್ನ 'ರಗ್ಗು ಅಲ್ಲಿಲ್ಲ. ಇದ್ದಿದ್ದರೆ ಅದು ಎಂತಹ ಬಡಬಾಗ್ನಿಗೂ ಬೇಯುವ ಚಿಹ್ನೆ ಕೂಡ ತೋರಿಸುತ್ತಿರಲಿಲ್ಲವೆಂಬುದು ನಿನಗೆ ಗೊತ್ತೇ ಇದೆಯಲ್ಲ !

ಅಲ್ಲದೆ ಅಕಸ್ಮಾತ್ ಬೇಹುಷಾರಿಯಿಂದ ರೈಲಿನಲ್ಲಿ ಕಳೆದುಹೋಗಿದ್ದರೆ, ಖಂಡಿತಾ ಇಷ್ಟರಲ್ಲೇ ನಿನ್ನ ಅಡ್ರೆಸ್ಸಿಗೆ ಅದರ ಪಾರ್ಸಲ್ ಬರುತ್ತೆ. ಅದು ಕಾಶೀವರೆಗೆ ಪ್ರಯಾಣ ಮಾಡಿದ್ದರೂ ವಾಪಸ್ M. S. R. ಗೇ ಬರುತ್ತೆ. ಬರೀ ವಾಸನೆಯಿಂದ ಕಳೆದು ಹೋದ ಮಾಲುಗಳ ಮಾಲೀಕರನ್ನು ಪತ್ತೆ ಹಚ್ಚುವ ಎಕ್ಸ್‌ಪರ್ಟ್‌ಗಳಿದ್ದಾರಲ್ಲ ರೈಲ್ವೆ ಡಿಪಾರ್ಟ್‌ಮೆಂಟುಗಳಲ್ಲಿ. ತಾಳಿದವನು ಬಾಳಿಯಾನು.

ಇತಿ,

ಆನಂತರ ಎರಡು ವಾರ ಅವನ ಉಸಿರಿಲ್ಲ. ಆಮೇಲೆ ಒಂದು ಮಂಗಳವಾರ ಮಟ ಮಟ ಮಧ್ಯಾಹ್ನ ಅರಿಸಿನ ಪೂರಿತ ಲಕ್ಕೋಟೆಯೊಂದು ಬಾಗಿಲ ಸಂದಿನಲ್ಲಿ ಬಿತ್ತು.

ನನ್ನ ಅಚ್ಚುಮೆಚ್ಚಿನ ಬಚ್ಚಾ,

ಮೆಚ್ಚಿದೆ ನಿನ್ನಯ ಹೆಚ್ಚಿನ ಅನುಭವದ ಮಾತಿಗೆ. ಬಚ್ಚಲಿಗಿಳಿದಾಗ. ಸ್ವಚ್ಛ ಮನಸ್ಸಿನಿಂದ ಯೋಚಿಸಿದೆ. ಮನ ಬಿಚ್ಚಿ, ತುಟಿ ಕಚ್ಚಿ ತಲಿ ಕೆರೆದೆ. ಅರೆ ಹುಚ್ಚಾ ! ನಿನ್ನ ನೆಚ್ಚಿನ ಹಚ್ಚಡ ಇಲ್ಲೇ ಎಲ್ಲಾದರೂ ಬಚ್ಚಿಟ್ಟಂತೆ ಮರಯಾಗಿರಬಹುದೆ? ಹಲ್ಲಿ ಲೊಚ್ಚಲೊಚ್ಚೆಂದಿತು. ನನ್ನ ಹೊಟ್ಟೆಯಲ್ಲಿದ್ದ ಕಿಚ್ಚು ನಂದಿತು. ಬೆಚ್ಚಗೆರೆಡು ಚೊಂಬು ತಲೆಗೆ ಹಾಕಿ ಕಣ್ಣೊರಸಿಕೊಳ್ಳುವಾಗ ಹಿತ್ತಲಿನ ಹಚ್ಚ ಹಸುರಿನ ಮಧ್ಯೆ ಮಳೆಯೊಂದು ಬೆಚ್ಚಗೆ ಹೊಚ್ಚಿದ್ದಾಳೆ ನಮ್ಮಾಕೆ ಸೌದೆ ರಾಶಿಯ ಮೇಲೆ ನನ್ನ

water proof ಹಚ್ಚಿದವ. ಏನು ಕೆಟ್ಟಿದೆ ! ಹೆಚ್ಚೇಕೆ ತುಸು ರೇಗಿ 'ವಿಚ್ಚೀ' (ನಮ್ಮಾಕೆ 'ವಿಶಾಲಾಕ್ಷಿ—') ಅಂದೆ.

"ನಿಮ್ಮ ವಯವೇನು, ನಿಮ್ಮ ದುಪಟಿ ವಯದಿಂದ ಸೌದೆ ಅಂಥಾ ಮಳೆ ಯಲ್ಲೂ ಒಣಗಿ ಸದ್ಯ ಕಣ್ಣುರಿ ತಪ್ಪಿತು ನಾಲ್ಕು ದಿನ" ಅಂತ ರಗ್ಗು ತೆಗೆದು ಸೌದೆ ಒಳಕ್ಕೆ ಸಾಗಿಸಿದಳು.

ಹೆಚ್ಚೇನೂ ಇಲ್ಲ. ನಾಳೆ ವಾರ ಹಚ್ಚಿಡ ಒಗೆಯಬೇಕೆಂದು ಪ್ರೋಗ್ರಾಂ ಹಾಕಿದೆ. ಇದನ್ನು ಕೇಳಿ, ಆರು ಬಾರು ಸೋಪು, ಅರ್ಧ ಮಣ ಸೀಗೆ, ಒಂದು ಮಕರಿ ಚೌಳು ಮಣ್ಣು, ಬೇಯಿಸುವುದಕ್ಕೆ 5 ಮಣ ಸರ್ವೆ ಸೌದೆ, ಒಂದು ರಾಜಾ ರಾಣೀ ಸಾಬೂನು. ನಾಲ್ಕಾಣೆ ಪಾಷಾಣ ಎಲ್ಲಾ ಪಟ್ಟಿ ಹಾಕಿಟ್ಟಿದ್ದಾಳೆ ನಮ್ಮಾಕೆ.

ಮುಂದಿನ ತಿಂಗಳು ಮ್ಯಾಚಿಗೆ ಬರುವಾಗ ತರುತ್ತೇನೆ ನೋಡು. ಗುರುತೇ ಸಿಗಲಾರದು. ಅದು ನನಗೆ ಒಂಭತ್ತು ವರ್ಷದಿಂದ All purpose rug ಆಗಿದೆ. ಹೋಲ್ಡಾಲು ಜಮ್ಖಾನ, ಕಂಬಳಿ, ಕೆಲ ವೇಳೆ ಟವಲು. ಪಂಚೆ ಕೂಡ ಆಗಿದೆ ಪ್ರಯಾಣದಲ್ಲಿ !

ವೃಥಾ ತೊಂದರೆ ಕೊಟ್ಟೆ. ಕ್ಷಮಿಸು. ರಗ್ಗು ಪತ್ತೆಯಾದಾಗಿನಿಂದ ಮನಸ್ಸು ಉಲ್ಲಾಸವಾಗಿದೆ. ರಜ ತೆಗೆದುಕೊಂಡೆ ಈ ದಿನ. ನುಗ್ಗೇಕಾಯಿ ಹುಳಿ ಮಾಡಿ ಸಂಡಿಗೆ ಕರೀ ಅಂದಿದ್ದೇನೆ. ಅಷ್ಟೆ. ಅರರೆ ! ನನ್ನೆದುರಿಗೆ ಬಾಗಿಲ ಮೂಲೆಯಲ್ಲಿರುವ ರಗ್ಗನ್ನು ಯಾರೋ ಮೆಲ್ಲಗೆ ಎಳೆದಂತೆ ತೋರುತ್ತೆ, ಒಳಗಿಂದ. ಏನೋ ಕೃತ್ರಿಮ !

ಇಂತು,
ರಾಮು

ದಯಾನಿಧೇ ! ಸದ್ಯ ದುಪಟಿ ವ್ಯವಹಾರ ನಿಂತಿತಲ್ಲ ! ಒಂದು ಬಟ್ಟಲು ಚಾ ಹೀರೋಣ ಅಂತ ಎದ್ದು ಹೊರಟೆ.

—०—

## ಪುರಾಣದ ಪುಣ್ಯ ಕಥೆಗಳು

# ನಳ-ದಮಯಂತಿ

ನಳ ನಿಷಧ ದೇಶದ ರಾಜ. ವಿದರ್ಭದ ರಾಜಕುಮಾರಿ, ದಮಯಂತಿ. ಯಥಾಪ್ರಕಾರ ನಮ್ಮ ಹೀರೋ ಮತ್ತು ಹೀರೋಯಿನ್, ಇತರರ ಮೂಲಕ ಕೇಳಿತಿಳಿದು ಒಬ್ಬರನ್ನೊಬ್ಬರು ಪರಸ್ಪರ ಮೆಚ್ಚಿಕೊಂಡಿದ್ದರು.

ಮುಂದಿನ ಕಥೆ....

ಜಗತ್ತಿನ ಮೊಟ್ಟಮೊದಲ ಕೊರಿಯರ್ ಸರ್ವೀಸ ಹಂಸ, ನಳನ ಪ್ರೇಮ ಸಂದೇಶಗಳನ್ನು ದಮಯಂತಿಗೆ ಮುಟ್ಟಿಸಿತು.




ದಮಯಂತಿಯ ಸ್ವಯಂವರಕ್ಕೆ ನಳನಿಗೆ ಸ್ಪರ್ಧಿಗಳಾಗಿ ಅಗ್ನಿ, ವರುಣ ಮತ್ತಿತರ ದೇವತೆಗಳು, ನಳನ ರೂಪ ಧರಿಸಿ, ಬಂದಿಳಿಯುತ್ತಾರೆ.




ದಮಯಂತಿ ನಳನನ್ನು ವರಿಸಿದ್ದನ್ನು ಕೇಳಿ ಕುಪಿತನಾದ ಕಲಿ, ನಳನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಲು ನಿರ್ಧರಿಸಿ, ಪುಷ್ಕರನನ್ನು ನಳನೊಂದಿಗೆ ಜೂಜಾಡುವಂತೆ ಪ್ರೇರಿಸುತ್ತಾನೆ.



ಜೂಜಿನಲ್ಲಿ ಸೋತು; ನಳ, ದಮಯಂತಿ ಅಡವಿಗೆ ಹೋಗುತ್ತಾರೆ. ಕಲಿ, ಹಕ್ಕಿಯ ರೂಪದಲ್ಲಿ ಬಂದು ನಳನ ಉಳ್ಳ ಬಟ್ಟೆಯನ್ನು ಕಸಿದು ಕೊಂಡು ಹೋಗುತ್ತಾನೆ.




ರಾತ್ರಿ, ನಳ, ದಮಯಂತಿಯನ್ನು ಬಿಟ್ಟು ಹೊರಟು ಹೋಗುತ್ತಾನೆ. ದಮಯಂತಿ ಎಚ್ಚ.......




ಅಡವಿಯಲ್ಲಿ ಹೋಗುತ್ತಿರುವಾಗ ನಳ, ಕಾರ್ಕೋಟಕನಿಂದ ಕಚಿಯಲ್ಪಟ್ಟು ವಿಕೃತ ರೂಪ ಪಡೆಯುತ್ತಾನೆ.




ನಳ, ಬಾಹುಕನೆಂಬ ಹೆಸರಿನಿಂದ ಋತುಪರ್ಣ ರಾಜನಲ್ಲಿ ಕೆಲಸಕ್ಕೆ ಸೇರುತ್ತಾನೆ. ದಮಯಂತಿಗೆ ಸುಳಿವು ಸಿಕ್ಕಿ ನಳನನ್ನು ಬರಮಾಡಿಕೊಳ್ಳುವ ಸಲುವಾಗಿ, ತನ್ನ ಮರು ಸ್ವಯಂವರದ ಸುಳ್ಳು ಸುದ್ದಿಯನ್ನು ಋತುಪರ್ಣನಿಗೆ ಕಳುಹಿಸುತ್ತಾಳೆ.















ನೀತಿ: ರಾಜ್ಯ ಬಿಡೋ ಕಾಲಕ್ಕೆ ಸ್ವಿಸ್ ವೀಸಾ ರೆಡಿಯಾಗಿಟ್ಟಿರೋದು ಜಾಣತನ

# "ಮನು ಸ್ಮೃತಿ"

—ಶೀನೂ

---

ಪತ್ರಿಕೆಯೊಂದರಲ್ಲಿ ಇಪ್ಪತ್ತೊಂದನೇ ಶತಮಾನದ ಬಗ್ಗೆ ಬರೆದ ಲೇಖನ ಓದುತ್ತ ಕುಳಿತಿದ್ದೆ. ಆಗ ಪಾಟೀಲ ಪರಮೇಶಿ, ನನ್ನ ಚಡ್ಡಿ ದೋಸ್ತಿ ಬಂದ. ಕೋಪದಲ್ಲಿ ಬುಸುಗುಡುತ್ತಿದ್ದ. ಸರಿ. ಎಂದಿನಂತೆ ಹೆಂಡತಿಯ ಜತೆ ಜಗಳ ಕಾದು ಬಂದಿದ್ದಾನೆಂದುಕೊಂಡೆ. ಇನ್ನು ಇವನ ರಗಳೆಯನ್ನೇನು ಕೇಳುವದೆಂದು ನಾನೇ ವಿಷಯವನ್ನೆತ್ತಿದೆ.

"ಪರಮೇಶಿ ಇಪ್ಪತ್ತೊಂದನೆಯ ಶತಮಾನದ ಬಗ್ಗೆ ನಿನ್ನ ನಿರೀಕ್ಷೆಗಳೇನು?" ಎಂದೆ.

"ಹೆಂಗಸೂರು ಚುಟ್ಟಾ ಸೇದತಾರು" ಎಂದು ತಟ್ಟನೇ ಉತ್ತರಿಸಿದ. ಥತ್! ಮತ್ತೆ ಇವನದೇ ರಗಳೆ ಎಂದುಕೊಂಡೆ. ನನಗೆ ಗೊತ್ತು, ಹೆಂಡತಿಯ ಜತೆ ಜಗಳ ವಾದಾಗಲೆಲ್ಲ ಅವನು ಉದ್ವಿಗ್ನನಾಗಿರುತ್ತಾನೆ. ಮತ್ತು ಇಂತಹದೇ ಅಸಂಬದ್ಧ, ತಲೆ ತಿರುಕತನದ ಮಾತುಗಳನ್ನಾಡುತ್ತಾನೆ. ಇವನ ಪ್ರತಾಪವನ್ನು ಕೇಳದೇ ಗತಿ ಯಿಲ್ಲವೆಂದುಕೊಂಡು,

"ಯಾಕೆ ? ಮತ್ತೇನಂತಾಳೆ ನಿನ್ನ ಹೆಂಡತಿ ?" ಎಂದೆ.

"ಆಕೇನಂತಾಳು ? ಗಂಡಗ, ನಿ ಯಾಕ ಇನ್ನೂ ಇದ್ದೀ. Why are you is ? ಅಂತಾಳು" ಎಂದ,ಕೋಪದಲ್ಲಿ.

ಪರಮೇಶಿ ನನ್ನ ಬಾಲ್ಯ ಸ್ನೇಹಿತ ಪುಣ್ಯವಂತ: ಮೂರನೇ ವರ್ಗದಲ್ಲಿ ನಾಲ್ಕು ಸಲ ಗೋತಾ ಹೊಡೆದು ಶಾಲೆಗೆ ಶರಣು ಹೊಡೆದವ. ಈಗ ದೊಡ್ಡ ಕಂಟ್ರಾಕ್ಟರ ನಾಗಿ ಮೂರು ಬಂಗಲೆಗಳಲ್ಲಿ ಬದುಕಿ ನಾಲ್ಕು ಕಾರುಗಳಲ್ಲಿ ಓಡಾಡಿಕೊಂಡಿದ್ದಾನೆ. ನಾನು ಎಂ.ಎ. ಮುಗಿಸಿ "ಭಾರತೀಯ ಸಂಸ್ಕೃತಿಯ ಬಗ್ಗೆ ವಿದ್ವತ್ಪೂರ್ಣ ಪ್ರಬಂಧ ವನ್ನು ಮಂಡಿಸಿ ಡಾಕ್ಟರೇಟ್ ಗಿಟ್ಟಿಸಿ, ವಿಶ್ವವಿದ್ಯಾಲಯದಲ್ಲಿ ಕುರಿ ಕಾಯುತ್ತಿದ್ದೇನೆ. ಪರಮೇಶಿಯ ಪಾಲಿಗೆ ನಾನೊಬ್ಬ "ಮಾಸ್ತರ" ಮಾತ್ರ.

ಪರಮೇಶಿ ಮುಂದುವರೆದು ತನ್ನ ಶಂಖವನೂದಿದ. ನೋಡು ಮಾಸ್ತರಾ, ನಾ ಬೀಡಿ ಸಿಗರೇಟ ಸೇದಾಕ ಹತ್ತಿ ಇಪ್ಪತ್ತೈದು ವರಸಾತು. ಟೊಂಟಿಫ್ಯಾ. ಲಗ್ಗಣ ಆಗಿ

ಹದನೈದು ವರುಸಾತು. ಹಂತಾಕಿ ನಿನ್ನೆ ಮನ್ನೆ ಬಂದ ನನ್ನ ಹೇಣತಿ ಬಂದಳತೀ, ಸಿಗರೇಟು ಸೇದಬ್ಯಾಡ್ರೀ ಹಾಂಗಾಗತೈತಿ... ಬೀಡಿ ಸೇದಬ್ಯಾಡ್ರಿ—ಹಿಂಗಾಗತೈತಿ ಅಂತ ನನ್ನ ಜೀವಾ ತಿಂತಾಳು. ತಲಿ ಬ್ಯಾಸರ ಬಂದ ಮೋಗೈತಿ. ಅದಕ್ಕs ಇಪ್ಪ ತ್ತೊಂದನೇ ಶತಮಾನದಾಗರೇ ಎಲ್ಲಾ ಹೆಂಗಸೂರು ಬೀಡಿ ಚುಟ್ಟಾ ಸೇದಾಕ ಹತ್ತಿದರ ಎಷ್ಟು ಬೇಶಾಗತೈತಿ. ಅಂ! ನಿದಾನ ಆವಾಗರs ನಮ್ಮ ಮಕ್ಕಳೂ ಮರೀ ಸುಖದಿಂದ ಬೀಡೀ ಸಿಗರೇಟು ಸೇದತಾರಲ್ಲ !" ಎಂದ ಕೋಪದಲ್ಲಿ.

ವಿಷಯಾಂತರ ಮಾಡದೇ ಗತ್ಯಂತರವಿಲ್ಲವೆಂದುಕೊಂಡು ಕೇಳಿದೆ. "ಅಲ್ಲೋ" ಸ್ವಲ್ಪ ಸೀರಿಯಸ್ಸಾಗಿ ಹೇಳಲ್ಲ. ಈ ಬೀಡಿ ಚುಟ್ಟಾ ಸದ್ಯಕ್ಕ ಬಿಡು. ಇಪ್ಪತ್ತೊಂ ದನೇ ಶತಮಾನದಾಗ ನಿನ್ನ ನಿರೀಕ್ಷೆಗಳೇನು ?" ಎಂದೆ ಬಿಡದಲೆ.

ಪರಮೇಶಿ ಕೂಡಲೇ ಹೇಳಿದ "ತೊಗೊಂಡ ಲಂಚಕ್ಕ ರಿಸೀಟ ಕೊಡಾಕ ಹತ್ತತಾರು" ಎಂದು ಕ್ಷಣ ಬಿಟ್ಟು ನನ್ನ ಮುಖ ನೋಡಿ "ತಿಳೀಲಿಲ್ಲ ಹೌದಲ್ಲೊ, ಈಗ ನೋಡು ಎಲ್ಲಾ ಡಿಪಾರ್ಟಮೆಂಟಿನ್ಯಾಗೂ ತಿನ್ನವರs, ನಿನ್ನಂತಹ ಸಾಲೀ ಮಾಸ್ತರ ಸಹಿತ ತಿನ್ನಾಕ ಹತ್ಯಾರ ಅಂತ ಕೇಳಿನಿ. ಹಿಂತಾದರಾಗ ರಾಜಾರೋಷ ವಾಗಿ ತಿಂದ ಲಂಚಕ್ಕ ಪಾವತೀ ಯಾಕ ಕೊಡಬಾರದು ? ಹಿಂಗ ರಿಸೀಟ ಕೊಟ್ಟರs ನಮ್ಮಂತಹ ಬಿಸಿನೆಸ್ ಮಂದಿಗೆ ಇನ್‌ಕಮ್ ಟ್ಯಾಕ್ಸ ಫಾಯಿಲ್ ಮಾಡಾಕs ಎಷ್ಟು ಅನುಕೂಲ" ಎಂದ.

ನಾನು ಲೊಚಗುಟ್ಟಿದೆ. "ನಿನ್ನ ಬೀಡೀ ಚುಟ್ಟಾ, ಲಂಚ, ಇನ್‌ಕಮ್ ಟ್ಯಾಕ್ಸು, ಇಷ್ಟು ಬಿಟ್ಟು ಬೇರೆ ಏನೂ ಹೊಳೆಯೂದಿಲ್ಲೇನು ನಿನ್ನ ಮಡ್ಡ ತಲೆಗೆ ಇಪ್ಪತ್ತೊಂದನೇ ಶತಮಾನದ ಭಾರತದಲ್ಲಿ ವ್ಯಾಪರ ಉದ್ದಿಮೆ, ಬ್ಯಾಂಕು...

ಒಂದು ಕ್ಷಣ ಮೌನವಾಗಿದ್ದು ಪರಮೇಶಿ ಬಾಯಿಬಿಟ್ಟ. "ಇಪ್ಪತ್ತೊಂದನೇ ಶತ ಮಾನದ ಬಾರತದಾಗ ಮಾತ್ಮಾ ಘಾಂದಿಯವರ ಕನಸಿನ ರಾಜ್ಯ ಉಧಯ ಆಗಿರತೈತಿ"

"ಅಂದರೆ ?" ಕೇಳಿದೆ ನಾನು.

"ದೊಡ್ಡ ದೊಡ್ಡ ಇಂಡಸ್ಟ್ರೀಗಳೆಲ್ಲ ಹಾಳಾಗಿ ಹೋಗಿ ಬರೇ ಬ್ಯಾರೇಜ ಆ್ಯಂಡ ಕಾಟೇಜ ಇಂಡಸ್ಟ್ರೀಜ ಅಷ್ಟ ಉಳದಿರತಾವ. ಮಂದಿ ಮೈ ತುಂಬೆಲ್ಲ ಕಾದೀನ ಕಾದಿ. ಕಾದೀ ಸೀರಿ, ಕಾದೀ ಧೋತರ, ಎಲ್ಲಾ ಕಾದೀ. ಮುಂಚಿನ ಹಂಗ ಜನ ಎಲ್ಲ ಹಂಚಿನ ಮನೀ ಒಳಗ ಲಾಟೀನು ಅಂದರ ಕಂದೀಲು ಹಚಗೊಂಡು ರಾಟೀಯಿಂದ ನೂಲು ತೆಗಿತಿರತಾರs. ಸೇಂಗಾ ದೆಣ್ಣಿ, ಎತ್ತಿನ ಗಾಣs ಕಾದೀ, ಹ್ಯಾಂಡಲೂಮು ಕೈಮಗ್ಗ,

ಅಂಬರ ಚರಕಾ. ಎಲ್ಲ ತೇಟ ಘಾಂದಿನ್ ಘಾಂದಿ" ಎಂದ.

ನನಗೆ ಆಶ್ಚರ್ಯ. "ಅಲ್ಲೊ? ಒಮ್ಮೆಲೇ ಇಪ್ಪತ್ತೊಂದನೆ ಶತಮಾನ ಇನ್ನೊಂದು ಗಾಂಧಿಮಯ ಯಾಕ ಆಗ್ತದ? ಒಮ್ಮೆಲೇ ಖಾದೀ ಸೀರೆ, ಖಾದೀ ಧೋತರ, ಗಾಣದ ಎಣ್ಣೆ...ಇವೆಲ್ಲ ಯಾಕ ?..." ಎಂದೆ.

"ಯಾಕಂದ್ರs ಯಿದ್ದುತ್..." ಅಂದ.

"ಏನು ಹಂಗs "ಯಿದ್ದುತ್" ಅಂದರ, ಎಂದೆ ಅಸಹನೆಯಿಂದ.

"ಯಿದ್ದುತ್ ಅಂದ್ರ ಪಾವರ್, ಈಗs ಈ ಪಾಟಿ ಪಾವರ್ ಕಟ್ ನಡದೈತಿ, ಇನ್ನ ಇಪ್ಪತ್ತೊಂದನೇ ಶತಮಾನದಾಗ ಪಾವರ ಉಳದಿರೂದಿಲ್ಲ ಏನ್s ಕಟ್ ಮಾಡ ತಾರು... ಎಂದ.

"ನಿನ್ನ ಈ ಅಗಾಧವಾದ ಶುದ್ಧವಾದ ವಾಣಿ ಸ್ಪಷ್ಟ ಉಚ್ಚಾರ ಏನs ಅದ ಅಲ್ಲs ಇದನ್ನ ಹೊರಗೆಲ್ಲೂ ಪ್ರದರ್ಶನ ಮಾಡಬ್ಯಾಡ" ಎಂದೆ ಕ್ರುದ್ಧನಾಗಿ.

"ಯಾಕ ?" ಎಂದ ಪರಮೇಶಿ.

"ಯಾಕಂದ್ರ ಫಕ್ಕನ ಒಂದ ವೇಳೆ, ದೂರದರ್ಶನ–ಅಂದರ ಟಿ.ವ್ಹಿ.ಯವರೇ, ನಾದರೂ ನಿನ್ನ ಭಾಷಾ ಕೇಳಿದರ ಒಮ್ಮೆಲೇ ನಿನ್ನನ್ನು "ವಾರ್ತಾವಾಚಕ" ಅಂದರೆ "ನ್ಯೂಸ್ ರೀಡರ" ಅಂತ ನೇಮಿಸಿಕೊಂತಾರು..." ಎಂದೆ.

ಪರಮೇಶಿ "ಬಿಡು. ಬಿಡು. ನಿನ್ನ ಟಿ.ವ್ಹಿ.ಯರ ಎಷ್ಟು ? ಭಾಳಾದರ ಇನ್ನೊಂದು 'ಹತ್ತು ವರಸ ಆಮ್ಯಾಲೆ ಅವೂ ಇರಂಗಿಲ್ಲ" ಎಂದ.

"ಅದೇಕೆ ?" ಕೇಳಿದೆ ನಾನು.

"ಯಿದ್ದುತ್" ಎಂದ, ಪರಮೇಶಿ.

ನನ್ನ ಸಹನೆ ಮೀರುತ್ತಾ ಬಂತು. "ಎಷ್ಟೇ ಪವರ ಶಾರ್ಟೇಜ (Power shortage) ಇದ್ದರೂ ನಿನ್ನ ತಲೆಗೆ shock ಕೊಡುವಷ್ಟು 'ಯಿದ್ದುತ್' ನಮ್ಮ ದೇಶದಲ್ಲಿ ಇದ್ದೇ ಇರುತ್ತದೆ ಬಿಡು. ಈಗ ಉಳಿದ ವಿಷಯಗಳ ಬಗ್ಗೆ ಹೇಳು. ಬರುವ ಶತಮಾನದಲ್ಲಿ ಹಣಕಾಸು–ಬ್ಯಾಂಕುಗಳು... ಎಂದು ಹೇಳಲು ಪ್ರಾರಂಭಿ ಸುತ್ತಿದ್ದಂತೆಯೇ.

"ಇರಂಗಿಲ್ಲ" ಎಂದ.

"ಏನು ಹಾಗೆಂದರೆ ?" ಎಂದು ಕೇಳಿದೆ.

"ಇರಂಗಿಲ್ಲ ಎಂದರೆ ಇರುವದಿಲ್ಲ" ಎಂದ ಪರಮೇಶಿ ತನ್ನನ್ನು ಅಣಕಿಸುತ್ತ.

"ಸರಿ ಏನು ಇರಂಗಿಲ್ಲ?" ಎಂದು ಕೇಳಿದೆ ಮತ್ತೆ.

"ಬರುವ ಶತಮಾನದಲ್ಲಿ ಭಾರತ ದೇಶದಲ್ಲಿ ಬ್ಯಾಂಕುಗಳು ಇರಂಗಿಲ್ಲ" ಎಂದ.

"ಯಾಕೆ ?" ಎಂದೆ.

"ಯಾಕಂತ ನನ್ನೇನು ಕೇಳತಿ. ದೇವಿಲಾಲನ್ನ ಕೇಳು ತಿಳಿತೈತಿ" ಎಂದ.

ಇನ್ನೂ ನಗದಿದ್ದರೆ ಇವನು ಕೇಳುವವನಲ್ಲವೆಂದು ಗಟ್ಟಿಯಾಗಿ ನಕ್ಕುಬಿಟ್ಟೆ. ಕ್ಷಣಬಿಟ್ಟು ಮತ್ತೆ ಕೆಣಕಿದೆ.

"ಅಲ್ಲೋ ಪರಮೇಶಿ ಇಪ್ಪತ್ತೊಂದನೆ ಶತಮಾನದ ಬಗ್ಗೆ ಕಲ್ಪನಾ ಮಾಡೋದು ಎಷ್ಟೊಂದು ರಮ್ಯ ಅಲ್ಲವೇನೋ? ಅಂದಿನ ಶಿಕ್ಷಣ. ಪದ್ಧತಿ, ಜನರ ಬದುಕು.... ಊಟ ತಿಂಡಿ..." ಎನ್ನುತ್ತಿದ್ದಂತೆಯೇ ನನ್ನನ್ನು ನಡುವೆಯೇ ತುಂಡರಿಸಿ ಪರಮೇಶಿ

"ಹಂಗಾರ ಹೇಳತೇನ ಕೇಳು ಡಿಸ್ಟರ್ಬ ಮಾಡಬ್ಯಾಡ ನಡನಡಕ..." ಎಂದು ಪ್ರಾರಂಭಿಸಿದ.

"1995 ಕ್ಕ ಬುಕ್ಕಿಂಗ್ ಮಾಡಿದವರಿಗೆಲ್ಲ 2001ನೇ ಇಸ್ವಿಗೆ ಸಿಗತಾವು" ಎಂದ.

"ಏನೋ ಅದು ?" ಎಂದೆ.

"ಎಂ.ಟಿ.ಆರ್. ದ ದೋಸೆ! ಎಂ.ಟಿ.ಆರ್.ದ ದೋಸೆಗಳಿಗೆ ಜನರ ಕ್ಯೂ ಬೆಳೆದೂ ಬೆಳೆದೂ ಸರಕಾರದವರು ಎಂ.ಟಿ.ಆರ್. ನ್ನ ರಾಷ್ಟ್ರೀಕರಣ ಮಾಡಿರತಾರ, ದೋಸೆ ತಿನ್ನಬೇಕನ್ನವರೆಲ್ಲ ಮುಂಚೆಕ "ಡಿ" ಫಾರ್ಮ ತುಂಬಿ, ಒಂದೊಂದು ಬ್ಯಾಂಕ ಗ್ಯಾರಂಟೀ ಜತೆಗೆ ಬುಕ್ಕಿಂಗ ಮಾಡಬೇಕು. "ಡಿ" ಫಾರ್ಮ್ಸ ಸ್ಟೇಟ ಬ್ಯಾಂಕ ನ್ಯಾಗಷ್ಟ ಸಿಗತಾವು. ಹದಿನೈದು ರೂಪಾಯಿಗೆ ಒಂದು ಫಾರ್ಮ. ಚಲನ ತುಂಬಿ ಪ್ರಾಪರ ಹೆಡ್ಡಿನ್ಯಾಗ ಭರ್ತಿ ಮಾಡಿದರ ಒಬ್ಬರಿಗೆ ಒಂದು ಫಾರ್ಮ ಕೊಡತಾರ.

ಅವಕ್ಕ ಡೊಮಿಸ್ಯಾಲ (Domicile) ಸರ್ಟಿಫಿಕೇಟು ಮತ್ತು ಕಾಸ್ಟ (caste) ಸರ್ಟಿಫಿಕೇಟು ಲಗತ್ತಿಸಿ. 'ಗ್ಯಾಝೆಟೆಡ್ ಆಫಿಸರ್' ಇಲ್ಲವೇ 'ಜಷ್ಟಿಸ್ ಆಫ್ ಪೀಸ್ ಇಲ್ಲವೇ ಮೆಂಬರ ಆಫ್ ಪಾರ್ಲಿಮೆಂಟ, ಇವರಿಂದ ಸಹಿ ಮಾಡಿಸಿ, ಡಿ. ಸಿ ಆಫೀಸನ್ಯಾಗ ತುಂಬಿ ಬರಬೇಕು. ಅಂದರ ನಾಲ್ಕೈದು ವರುಸ ಆದಮ್ಯಾಗ ಒಂದು ದೋಸೆ. ಅಷ್ಟರಾಗ ಫಾರ್ಮ ತುಂಬಿದವ ಸತ್ತುಹೋದರ ಅವನ ಮಕ್ಕಳಿಗೆ ಅಥವಾ ವಾರಸಾದವರಿಗೆ ದೋಸೆ ಸಿಗತೈತಿ. ಆದರ ಹಾಂಗ ಸತ್ತವನ ದೋಸೆ ಸಿಗಬೇಕಾದರ ಅವನ ಮಕ್ಕಳಾಗಲೀ ಯಾ ವಾರಸಾದವರಾಗಲಿ ಸಿವಿಲ್ ಕೋರ್ಟಿಗೆ ಹೋಗಿ ಸಕ್ಸೆಶನ್ ಸರ್ಟಿಫಿಕೇಟು ತೊಗೋಬೇಕು...

ಪರಮೇಶಿ ಹೇಳುತ್ತಿದ್ದ. ನಾನು ಕೇಳುತ್ತಿದ್ದೆ.

...ಸರಕಾರದವರು ವೀಕರ ಸೆಕ್ಷನ್ (weaker section) ದವರಿಗೆಂತ ಬ್ಯಾರೆ "D" form ಮಾಡಿರತಾರ ಕೆಂಪು ಬಣ್ಣದವು. ಅವಕ್ಕ ಬರೇ ಮೂರು ರೂಪಾಯಿ ಮಾತ್ರ. ಅಷ್ಟs ಅಲ್ಲದs ಪ್ರತಿ ಹದಿನೈದು ದೋಸೆಗಳಿಗೆ, ಆರು ದೋಸೆ ಎಸ್.ಸಿ.ಎಸ್.ಟಿ. ಯವರಿಗೆ, ಮೂರು ಗಿರಿಜನರಿಗೆ, ಮೂರು ಮೈನಾರಿಟಿಯವರಿಗೆ ಅಂತ ಕಡ್ಡಾಯ ಮಾಡಿರತಾರ. ಇಷ್ಟಾದರೂ ದೋಸೆಗಳೆಲ್ಲ ಬರೇ ಲಿಂಗಾಯಿತರಿಗೆ, ಗೌಡರಿಗೆ ಸಿಗತಾವು. ಹರಿಜನರಿಗೆ ಸಿಗವೊಲ್ಲವು ಅಂತ ಚಳವಳಿ ನಡದಿರತದ...

ಹಾಗೇ ಬಿಟ್ಟಿದ್ದರೆ ಪರಮೇಶಿಯ ವಿಚಾರ ಲಹರಿ ಎಲ್ಲೆಲ್ಲಿ ಓಡುತ್ತಿತ್ತೋ. ನಾನೇ ಬ್ರೇಕ್ ಹಾಕಿದೆ.

"ಅಲ್ಲೋ ಪರಮೂ, ಯಾವಾಗಲೂ ಬರೇ ಲಿಂಗಾಯಿತರೂ, ಗೌಡರೂ, ಹರಿಜನ ಗಿರಿಜನರು ಇವರದೇ ಆತಲ್ಲೊ ? ಪಾಪ ಬ್ರಾಹ್ಮಣರು ಏನು ಮಾಡಬೇಕು ? ಅವರ ಬಗ್ಗೆ ನಿನ್ನ ಇಪ್ಪತ್ತೊಂದನೆಯ ಶತಮಾನದಾಗ ಏನಾರ ವ್ಯವಸ್ಥಾ ಮಾಡೀ ಏನು ?" ಎಂದು ಕೇಳಿದೆ. ಪರಮೇಶಿ "ಹಾರೂರs ? ಅವರಿಗೇನು ? ಇಪ್ಪತ್ತೊಂದನೇ ಶತಮಾನದಾಗ ಎಲ್ಲಾ ಹಾರೂರಿಗೂ ಎಂಪ್ಲಾಯಿಮೆಂಟ ಸಿಕ್ಕಿರತೈತಿ. ಆರಾಮಾಗಿ ಇರತಾರು" ಎಂದ.

"ಅದೆಂತಹ ಎಂಪ್ಲಾಯಿಮೆಂಟೋ, ಅದೂ ಬ್ರಾಹ್ಮಣರಿಗ !

ಇಪ್ಪತ್ತನೇ ಶತಮಾನದಾಗs ಅವಕ್ಕ ಕೆಲಸ ಇಲ್ಲ. ಇನ್ನ ಇಪ್ಪತ್ತೊಂದನೇ ಶತಮಾನದಾಗ ಎಂತಹ ಕೆಲಸ ?" ಎಂದೆ ತಿಳಿಯದೆ.

"ಅಯ್! ಇಷ್ಟೂ ತಿಳೀಲಿಲ್ಲ ಹೌದಲ್ಲೊ ? ಅದಕ್ಕs ಅಂತಾರ ನೋಡು 'ಪೋಲಿಸಗ ನಿದ್ದಿ ಇಲ್ಲ ಮಾಸ್ತರಗ ಬುದ್ಧಿ ಇಲ್ಲ' ಅಂತ. ಎಲ್ಲಾ ಹಾರೂರಿಗೂ ಕೆಲಸ

ಸಿಕ್ಕಿರತ್ತೈತಿ. ಎಂ.ಟಿ.ಆರ್.ದಾಗ ದೋಸೆ ಹುಯ್ಯೊ ಕೆಲಸ. ಕುಂತಿರತಾರ "ಚ್ಯುಂ" ಅನಕೋತ ಎಂದ.

ನಾನು ಖಿನ್ನನಾಗಿ, ಹತಾಶನಾಗಿ "ನಿನ್ನ ಜತೆ ಮಾತನಾಡುವ ನಾನೇಮೂರ್ಖ. ಇಪ್ಪತ್ತೊಂದನೇ ಶತಮಾನಕ್ಕರಃ ನಿನಗ ಸ್ವಲ್ಪ ಬುದ್ಧಿ ಬರಲಿ ಅಂತ ಆಶಾ ಮಾಡ ತೇನಿ" ಎಂದೆ.

ಪರಮೇಶಿ ಒಂದು ಕ್ಷಣ ಮೌನದಲ್ಲಿ ನನ್ನನ್ನೇ ನಿಟ್ಟಿಸಿದ. ಆ ಮೇಲೆ ಮೆಲ್ಲನೇ ಪ್ರಾರಂಭಿಸಿದ.

...ಏ ಶೀನೂ, ನೀ ಬಾಹಾಳ ಶಾಣ್ಯಾ ಅಂತ ತಿಳಿದೀ ಏನು ? ಅಲ್ಲೋ ಈ ಕೇಗಿದ ರೇಗನ್, ಗರ್ವಿಷ್ಠ ಗರ್ಬೊಚೋವ, ಆರಿಷ್ಟ ಅರಾಫತ್ತು...ರಕ್ತದ ರುಚಿ ಕಂಡ ಶೀಖರು,...ಶಿಲೋನದ ಅಹಿಂಸಾವಾದಿ ಬೌದ್ಧರು...ಇರಾಣದ ಇರಾಕದ ತಲೆ ತಿರುಕ ತುರುಕರು ಇವರೆಲ್ಲರ ಕೋಲಾಹಲದಾಗ ಅಧೆಂಗ ಬರತದ ನಿನ್ನ ಇಪ್ಪ ತ್ತೊಂದನೇ ಶತಮಾನ ? ಅದಕ್ಕೇನು ತಿಳಿಯೂದಿಲ್ಲೇನು... ಒಂದು ನಾಲ್ಕಾರು ಆಟಂ ಬಾಂಬುಗಳನ್ನು ಪಟಪಟ ಅಂತ ಆ ಕಡೆ ಈ ಕಡೆ ಹಾಕಿದರ ಮುಗೀತು ನಿನ್ನ ಇಪ್ಪತ್ತೊಂದನೆಯ ಶತಮಾನ ಬರೋಣೆ ಇಲ್ಲ..."

ನಾನು ಅವನ ಮಾತನ್ನು ಅರ್ಧಕ್ಕೆ ತುಂಡರಿಸಿ ಹೇಳಿದೆ: ಜಗತ್ತು ನಾಶ ಆಗಲಿ, ಪ್ರಳಯ ಆಗಲಿ, ಏನ ಆಗಲಿ, ಯಾವದೇ ರೂಪದಲ್ಲಿ ಇಪ್ಪತ್ತೊಂದನೆ ಶತಮಾನ ಅನಕ ಬರಲೇ ಬೇಕಲ್ಲ...? ಎಂದೆ.

ಕೂಡಲೇ ಪರಮೇಶಿ ಹೇಳಿದ. "ಏನು ಪ್ರಳಯ ಆಕ್ಕೈತೆ?... ಹಂಗಾರ ನಾನೂ ಹೇಮಾ ಮಾಲಿನೀ ಇಬ್ಬರಃ ಒಂದು ಗುಡ್ಡದ ಮ್ಯಾಗ ಕುಂತಿರತೇವಿ" ಎಂದ.

"ನೀನೂ...? ಹೇಮಾ ಮಾಲಿನಿ... ? ಏನು ಹಂಗ ಹುಚ್ಚು ಹುಚ್ಚಾಗಿ ಮಾತಾಡಿದರ...?" ಎಂದೆ ಅವನ ಮಾತಿನ ತಲೆ ಬುಡ ತಿಳಿಯದೆ.

"ಅಲ್ಲ–ಮತ್ತ– ಅಂತಿಂಥವರೇನ—ಹೇಮಾಮಾಲಿನೀನ ಇರಲಿ ಅಂವೆ" ಎಂದ ಪರಮೇಶಿ.

ನನಗೆ ಹುಚ್ಚು ಕೋಪ ಬಂದು "ಏನು ನಿನ್ನ ತಲೆ ಕೆಟ್ಟಿನೆಯೇನು? ಪ್ರಳ ಯಕ್ಕಃ ಮತ್ತೂ ನೀನೂ ಹೇಮಾಮಾಲಿನಿ, ಗುಡ್ಡದ ಮ್ಯಾಲೆ ಕೂಡ್ರೂದಕ್ಕೂ ಏನು ಸಂಬಂಧ ಬೊಗಳು... ಎಂದೆ.

ಪರಮೇಶಿ ಶಾಂತ ಸ್ವರದಲ್ಲಿ "ಮತ್ತ 'ಇಳಾ, ಆಗಾಕ ಒಬ್ಬಾಕಿ ಯಾವಾಕೆರಃ ಬೇಕಲ್ಲ...?" ಎಂದ.

# ಒಂದು ಕುರ್ಚಿಯ ಕಥೆ

—ಜಿ. ಎಸ್. ಜಿ

---

ನಮ್ಮ ಕನ್ನಡ ಪಂಡಿತರು "ಚಾಮಯ್ಯ ಎಂದರೆ ನಮಗೆಲ್ಲಾ ಭಯ, ಭಕ್ತಿ, ಗೌರವ. ನಮಗೆ ಕನ್ನಡದ ಮೇಲೆ ಅಭಿಮಾನ, ಪ್ರೀತಿ ಹುಟ್ಟಲು ಅವರೇ ಕಾರಣ.

ಚಾಮಯ್ಯ ಅವರು ಅಜಾತಶತ್ರು, ಸಜ್ಜನರು, ಸರಳ ಜೀವಿ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಈ 20ನೇ ಶತಮಾನಕ್ಕೆ ಹೊರತಾದವರು. ಅದಕ್ಕೇನೇ ಅವರು ಈಗಿಲ್ಲ. Fairfax, Bofors ಗಲಾಟೆಗಿಂತಲೂ ಮುಂಚೆಯೇ ಕಣ್ಣು ಮುಚ್ಚಿಕೊಂಡ ಪುಣ್ಯಾತ್ಮರು.

ಅವರದ್ದು ಚಿಕ್ಕ ಸಂಸಾರ, ಚೊಕ್ಕ ಸಂಸಾರ, ಸುಖಕ್ಕೆ ಆಧಾರ (ಯಾರ ಸುಖಕ್ಕೆ ?) ಒಬ್ಬನೇ ಮಗ. ಚೆನ್ನಾಗಿ ಓದಿಸಿದರು. ಮದುವೆ ಮಾಡಿದರು. ಹುಡುಗ ಜಾಣ. ಪ್ರತಿಭಾವಂತ. ದೊಡ್ಡ ಕೆಲಸವೇ ಸಿಕ್ಕಿತು. ದೆಹಲಿಯಲ್ಲಿ ಇದಾನೆ.

ರಿಟೈರು ಆದ ಮೇಲೆ ಚಾಮಯ್ಯ ಅವರು ಹೆಂಡತಿಯೊಡನೆ ತಮ್ಮ ಚಿಕ್ಕ ಮನೆಯಲ್ಲೇ, ನಮ್ಮ ಊರಲ್ಲೇ ಇದ್ದರು. ಎಲ್ಲರಿಗೂ ಬೇಕಾದವರು. ಬೇಕಾದಾಗ ಮಗನ ಮನೆಗೆ ಹೋಗಿ ಬರುತ್ತಿದ್ದರು. ಆತನೂ ಆಗಾಗ ಬಂದು ಹೋಗುತ್ತಿದ್ದ. ದೆಹಲಿಗೂ ತಂದೇನ ಕರೆದಿದ್ದ. ಇವರು "ನನಗೆ ಒಗ್ಗೋಲ್ಲ" ಎಂದುಬಿಟ್ಟಿದ್ದರು. ಒಟ್ಟಿನಲ್ಲಿ ನೆಮ್ಮದಿಯಾಗಿದ್ದರು.

ಇದ್ದಕ್ಕಿದ್ದಂತೆ ಒಂದು ದಿನ ಚಾಮಯ್ಯನವರ ಹೆಂಡತಿ ನಮ್ಮ ಮನೆಗೆ ಬಂದರು.

"ಕೂಡಲೇ ಬಾಪ್ಪಾ. ನಮ್ಮ ಮನೆಯವರು ಒಂದು ಥರಾ ಆಡ್ತಾ ಇದಾರೆ" ಎಂದು ಗಾಬರಿಯಿಂದಲೇ ಕರೆದರು.

ನಾನೂ ಗಾಬರಿಯಿಂದ ಅವರ ಮನೆಗೆ ಹೋದೆ. ಮೇಷ್ಟ್ರು ಕುರ್ಚಿಯ ಮೇಲೆ ಕೂತಿದ್ದಾರೆ. ಯಾರ ಪರಿವೆಯೂ ಇಲ್ಲ.

"ಹತ್ತು ಸಾವಿರಾನ ? ಹಾಗಾದರೆ ನೂರು ತತ್ತಾ, ಐವತ್ತು ಸಾವಿರಾನ ? ಐನೂರು ತತ್ತಾ. ದುಡ್ಡಿಲ್ಲವಾ? ಹಾಗಾದರೆ ಕೆಲಸ ಆಗೋಲ್ಲ. ನಾಳೆ ದುಡ್ಡು ತಗಂಡು ಬಾ. ಆಮೇಲೆ ನೋಡೋಣ. ನಿಂದೇನಪ್ಪಾ ? ದರಖಾಸ್ತಾ ? ಇವತ್ತಿಲ್ಲ. ಇಲ್ಲಿ

ಪ್ರಗಸಟ್ಟೆ ವ್ಯವಹಾರವೇ ಇಲ್ಲ,......ರಾಜಾ ಕದ ಹಾಕು. ಇವತ್ತಿಂದು ಎಷ್ಟಾತು ? ಮೂರು ಸಾವಿರಾನ ? ಇದ್ರಾಗೆ ಯಾರು ಯಾರಿಗೆ ಎಷ್ಟೆಷ್ಟು ಲೆಖ್ಖಾ ಮಾಡು...

ಹೀಗೆ ಹರಟ್ತಾನೇ ಇದಾರೆ. ನಾನು "ನಮಸ್ಕಾರ ಸರ್" ಎಂದೆ. "ಬನ್ರೀ. ನನಗೆ ಸೈಟಿಗೆ ಹೇಳಿದ್ದೆನಲ್ಲಾ. ನೋಡಿದಿರಾ ? ನೀವು ನೋಡಿದ ಮೇಲೆ ಆಯಿತು. ಐವತ್ತು ಸಾವಿರಾನ ? ಹೊಂದಿಸಿ ಬಿಡಿ. ನಿಮ್ಮ ಕಮಿಷನ್ ಕೊಡ್ತೀನಿ. ರಿಜಿಸ್ಟರ್ ಮಾಡಿಸೋದು ನನಗೇ ಹೇಳ್ತೀರಲ್ಲರೀ. ಅದರಲ್ಲೇ ಮುಳುಗಿ ತೇಲ್ತಾ ಇರೋನಿಗೆ" ಎಂದರು ಮೇಷ್ಟರು.

ನನಗೆ ತುಂಬಾನೇ ಭಯ ಆಯಿತು. ನಮ್ಮ ಚಾಮಯ್ಯ ಮೇಷ್ಟರ ಬಾಯಲ್ಲಿ ಒಂದು ದಿನವೂ ಹಣದ ಮಾತೇ ಹೊರಟಿದ್ದಿಲ್ಲ. ಎಂದೂ ಹಣಕ್ಕೆ ಬಾಯಿ ಬಿಟ್ಟವರಲ್ಲ ದುಡ್ಡು ಎಂದರೆ ದೂರ ಸರಿ; ಹೃದಯ ಎಂದರೆ ಹತ್ತಿರ ಬಾ ಅಂತಾರಲ್ಲ, ಹಾಗಿದ್ದೋರು ನಮ್ಮ ಮೇಷ್ಟ್ರು. ಇಂದು ! ಇದೇನಿದು ? ಹಣ ಬಿಟ್ಟು ಬೇರೆ ಮಾತೇ ಇಲ್ಲ. ಒಂದೇಸಮನೆ ಕೈ ಚಾಚ್ತಾನೇ ಇದಾರೆ. ಜೇಬಿನೊಳಕ್ಕೆ ಕೈ ತೂರಿಸ್ತನೇ ಇದಾರೆ ಇದು ಯಾಕೋ ವಿಪರೀತಕ್ಕೆ ಇಟ್ಟುಕೊಂಡಿದೆ. ಅರ್ಥವೇ ಆಗ್ತಾ ಇಲ್ಲ. ನಿಜಕ್ಕೂ ನಮ್ಮ ಗುರುಗಳಿಗೆ ಗರ ಬಡಿದಿದೆ. ಹುಚ್ಚೇ ಹಿಡಿದಿದೆ. ಹೆದರಿಕೆ ಆಯಿತು. ಅಯ್ಯೋ ಪಾಪ ! ಎನಿಸಿತು. ಅವರ ಹೆಂಡತಿ ಗೋಳೋ ಎನ್ನುತ್ತಿದ್ದಾರೆ.

"ಇದು ಯಾವಾಗಿನಿಂದ ?" ಕೇಳಿದೆ.

"ನೆನ್ನೆ ಮಧ್ಯಾಹ್ನ ತಿಪ್ಪಯ್ಯ ಬಂದಿದ್ದ. ಹರಾಜಿನಲ್ಲಿ ಕೆಲವು ಮರದ ಸಾಮಾನುಗಳನ್ನು ಕೊಂಡನಂತೆ. ಮೇಷ್ಟ್ರಿಗೆ ಏನಾದರೂ ಕೊಡೋಣ ಎನ್ನಿಸಿತಂತೆ. ಈ ಕುರ್ಚಿ, ಟೇಬಲ್ಲು ತಂದುಕೊಟ್ಟ. ಬೇಡಾ ಎಂದರೂ ಕೇಳಲಿಲ್ಲ. ಅವನ ಜತೆ ಚೆನ್ನಾಗಿಯೇ ಮಾತನಾಡಿದರು. ಊಟ ಮಾಡಿ ಮಲಗಿದರು. ನಾಲ್ಕು ಗಂಟೆಗೆ ಕಾಫಿ ಕುಡಿದು ಏನೋ ಓದುತ್ತಾ ಕುರ್ಚಿಯ ಮೇಲೆ ಕೂತಿದ್ದರು. ಇದ್ದಕ್ಕಿದ್ದಂತೆ ಇದು ಪ್ರಾರಂಭವಾಯಿತು" ಎಂದು ಹೇಳಿ ಕಣ್ಣು ಒರೆಸಿಕೊಂಡರು.

"ನೋಡೋಣ. ಸದ್ಯಕ್ಕೆ ನಿಮ್ಮ ಮಗನ್ನ ಕರೆಸೋದು ಬೇಡ. ಏನೋ ಷಾಕ್ ಆಗಿರಬೇಕು. ಸರಿ ಹೋಗುತ್ತೆ. ಗಾಬರಿಯಾಗಬೇಡಿ" ಎಂದು ಧೈರ್ಯ ಹೇಳಿ ಮನೆಗೆ ಬಂದೆ. ಅನಂತರ ಸ್ನೇಹಿತರಲ್ಲಿ ವಿಚಾರ ಮಾಡಿದೆ. ಬೆಂಗಳೂರಿಗೆ ಹೋಗೋದೇ ವಾಸಿ ಎಂದು ತೀರ್ಮಾನವಾಯಿತು. ಮೇಷ್ಟರನ್ನ ಕರೆದುಕೊಂಡು ಹೋಗಿ NIMHANSಗೆ ಸೇರಿಸಿದೆವು. ಎರಡೇ ದಿನದಲ್ಲಿ ಮಾಮೂಲಿನಂತೆ ಆದರು. ಮನೆಗೆ ಕರೆದುಕೊಂಡು ಬಂದೆವು. ಒಂದೆರಡು ದಿನ ಕಳೆಯಿತು. ಪುನಃ ಹಳೆಯ ರೋಗ

ಪ್ರಾರಂಭ. ಮತ್ತೆ ಬೆಂಗಳೂರು. ಹೀಗೆ ಮೂರು ನಾಲ್ಕು ಸಾರಿ ಆಯಿತು. ಕೊನೆಗೆ-ಅವರ ಮಗನಿಗೆ ತಂತಿ ಕೊಟ್ಟು ಕರೆಸಿದೆವು.

ಆತ ಬಂದವನೇ ತಂದೆಯನ್ನು ಆಸ್ಪತ್ರೆಗೆ ಸೇರಿಸಿದ. ಅಲ್ಲಿ ಎಲ್ಲ ವ್ಯವಸ್ಥೆಯನ್ನು ಮಾಡಿ ತಾಯಿಯನ್ನು ಅಲ್ಲಿಯೇ ಬಿಟ್ಟು ಊರಿಗೆ ಬಂದ. ಬಂದವನೇ ಒಂದು ಬುದ್ಧಿವಂತಿಕೆ ಮಾಡಿದ. ಆ ಕುರ್ಚಿ, ಮೇಜನ್ನು ಮುರಿದು ಒಲೆಗೆ ಹಾಕಿದ. ನಂತರ ತಂದೆಯನ್ನು ಕರೆದುಕೊಂಡು ಬಂದ. ಮೇಷ್ಟ್ರಿಗೆ ಖಾಯಿಲೆ ಮರುಕಳಿಸಲಿಲ್ಲ. ನಂತರ ಚನ್ನಾಗಿಯೇ ಇದ್ದರು.

ಅವನು ಕುರ್ಚಿಯನ್ನು ಮುರಿಯುವಾಗ ನಾನು ಅಲ್ಲಿಯೇ ಇದ್ದೆ. ಕುರ್ಚಿಯ ಬೆನ್ನಿನ ಮೇಲೆ **SRO(4)** ಎಂದು ಬರೆದಿದ್ದನ್ನು ನೋಡಿದ್ದೆ.

ಅವರ ಹುಚ್ಚಿಗೆ ಕಾರಣವಾದ ಕುರ್ಚಿಯ ಮೂಲವನ್ನು ಪತ್ತೆ ಮಾಡಲೇ ಮಾಡಲೇ ಬೇಕು ಎನಿಸಿತು. ತಿಪ್ಪಯ್ಯನ ಮನೆಗೆ ಹೋದೆ. ಅವನಿಂದ ತಿಳಿದದ್ದು ಇಷ್ಟು. ಅವನು ಡಿಸ್ಟ್ರಿಕ್ಟ್ ಆಫೀಸಿಗೆ ಹೋಗಿದ್ದನಂತೆ. ಅಲ್ಲಿ ಕೆಲಸಕ್ಕೆ ಬಾರದ ಹಳೆಯ ಮರದ ಸಾಮಾನುಗಳನ್ನು ಹರಾಜು ಹಾಕುತ್ತಿದ್ದರಂತೆ. ಬೆಲೆ ಕಡಿಮೆ ಎಂದು ಕೆಲವು ಸಾಮಾನುಗಳನ್ನು ಕೊಂಡನಂತೆ. ಅವುಗಳಲ್ಲಿ ಈ ಕುರ್ಚಿ, ಮೇಜೂ ಇದ್ದುವಂತ. ಅವುಗಳನ್ನು ರಿಪೇರಿ ಮಾಡಿಸಿ ಮೇಷ್ಟ್ರಿಗೆ ಕೊಟ್ಟಿದ್ದನಂತೆ.

ಆದರ **SRO(4)** ವಿಷಯ ಪತ್ತೆ ಆಗಲಿಲ್ಲ. ಡಿಸ್ಟ್ರಿಕ್ಟ್ ಆಫೀಸಿಗೆ ಹೋದೆ. ಅಲ್ಲಿ ವಿಚಾರಿಸಿದಾಗ ತಿಳಿದದ್ದು ಇಷ್ಟು. ಜಿಲ್ಲೆಗೆ ಸೇರಿದ ತಾಲ್ಲೂಕುಗಳಿಂದ ಕೆಲಸಕ್ಕೆ ಬಾರದ ಮರದ ಸಾಮಾನುಗಳನ್ನೆಲ್ಲಾ ತರಿಸಿ ಒಟ್ಟಿಗೆ ಹರಾಜು ಹಾಕಿದ್ದರಂತೆ. ಅನಂತರ ನಮ್ಮ ಊರಿನ ತಾಲ್ಲೂಕು ಆಫೀಸಿಗೆ ಬಂದೆ. ಅಲ್ಲಿಯ ನನ್ನ ಪರಿಚಯದ ಗುಮಾಸ್ತರನ್ನು **SRO(4)** ವಿಷಯವಾಗಿ ಕೇಳಿದೆ.

"ಸರ್ ಅದು **SRO** ಎಂದರೆ ಸಬ್ ರಿಜಿಸ್ಟ್ರಾರ್ ಆಫೀಸು ಇರಬೇಕು. 4 ಎಂಬುದು ಕುರ್ಚಿಯ ಸಂಖ್ಯೆ ಇರಬೇಕು" ಎಂದು ಹೇಳಿದರು.

ನನ್ನ ಪತ್ತೇದಾರಿಕೆ ಮುಗಿದಂತೆ ಆಯಿತು. ನಮ್ಮ ಚಾಮಯ್ಯ ಮೇಷ್ಟರ ಮನೆಗೆ ಬಂದದ್ದು ಯಾವುದೋ ತಾಲ್ಲೂಕಿನ ಸಬ್ ರಿಜಿಸ್ಟ್ರಾರ್ ಆಫೀಸಿನ ಕುರ್ಚಿ. ಅದರ ಮೇಲೆ ಕೂತಾಗಲೇ ನಮ್ಮ ಮೇಷ್ಟರ ಬುದ್ಧಿ ವಿಕಲ್ಪವಾದದ್ದು.

**ನೀತಿ :** ಋಷಿ ಮೂಲ, ನದಿ ಮೂಲ ನೋಡದಿದ್ದರೂ ಹಳೆಯ ಸಾಮಾನುಗಳನ್ನು ಕೊಳ್ಳುವಾಗ. ಅವುಗಳ ಮೂಲವನ್ನು ನೋಡಲೇಬೇಕು.



# ಬೆಂಗ್ಳೂರ್ ರಸ್ತೆಗ್ಳು

—ವಿಕಟಕವಿ

---

ಬೆಂಗ್ಳೂರ್ ರಸ್ತೆ ನೋಡ್ತಾ ನೋಡ್ತಾ
ಜುಂ ಅಂತೈತೆ ಮೈಯಿ
ಕಾರು ಬಸ್ಸು ದಾಳಿ ನೋಡಿ
ನಡಗ್ತೈತೆ ಕೈಯಿ ! 1

ನುಸುಳ್ತ ಬಂದ ಆಟೋ ರಾಜ
ಎಡದಾ ಸಂದೀ ಒಳಗೇ
ವಾಲಾಡ್ತಾನೆ ಹಾವಿನ್ಹಂಗೆ
ಪೋಲೀಸ್ ಮೂಗಿನ್ ಕೆಳಗೇ 2

ಅತ್ತ ನೋಡು ಭಾರೀ ಬಸ್ಸು
ಬರ್ತೈತ್ ಸೀಳ್ಕೊಂಡ್ ಗಾಳಿ
ಇತ್ತ ನೋಡು ತುಂಬಿದ್ ಲಾರಿ
ಎಬ್ಬಿಸ್ತೈತೆ ಧೂಳಿ ! 3

ಉತ್ರುಕ್ ನೋಡು ಶಾಸ್ತ್ರಿ ಒಬ್ರು
ಬರ್ತವ್ರ್ ಮೊಪೆಡ್ ಮೇಲೆ.
ಮದ್ವೇಗ್ ಪಾಪ ಓಗ್ಲೇ ಬೇಕು
ಮೀರ್‌ಲೇ ಬಾರ್ದು ವೇಳೆ ! 4

ಬೆಂಗ್ಳೂರ್ ರಸ್ತೆ ದಾಟ್ಬೇಕಂದ್ರೆ
ನಡ್ಕ ಬರ್ತೈತ್ ಸಂಗೇ
ಮನೆ ಬಾಕಿಲ್ ಸೇರೋ ಗಂಟ
ಆದುರುತ್ ಜೀವ ಅಂಗೇ ! 5

# ಪಿಂಡಗದ್ದೆ

—ಕೇಫ

---

ಪಿಂಡಗದ್ದೆ ಅಂತ ಒಂದು ಊರು. ಆ ಊರಿಗೆ ಆ ಹೆಸರು ಬರೋಕೆ ಕಾರಣ ಅಲ್ಲಿ ಮೊದಲು ಬಂದು ನೆಲೆಸಿದವ ಜಮೀನನ್ನು ಉಳುವಾಗ ಎರಡು ಬಿಳೀ ಉಂಡೆಗಳು ಸಿಕ್ಕಿದವು. ವಿಚಾರಿಸಿದ್ದರಲ್ಲಿ ಅವು ಹಿಂದೆ ಜನಮೇಜಯರಾಯ ಪರೀಕ್ಷಿತ್ ರಾಜನ ಶ್ರಾದ್ಧ ಮಾಡುವಾಗ ಇಟ್ಟಿದ್ದ ಪಿಂಡಗಳು ಅಂತ ತಿಳಿದು ಬಂತು. ಪಾಪಿ ಜನ್ಮ ಪರೀಕ್ಷಿತ್ ರಾಜನದು—ಅವನ ಪಿಂಡ ಕಾಗೆಗಳೂ ಮುಟ್ಟಲಿಲ್ಲ; ಭೂದೇವಿಯೂ ಸ್ವೀಕರಿಸಲಿಲ್ಲ. ಹಾಗೇ ಘಟ್ಟಿಯಾಗಿ ಮುರೆಯಾಗಿ ಕಟ್ಟಿದ್ದ ಹಾಗೆ ಉಳಿದಿದ್ದವು. ಊರಿಗೆ ಪಿಂಡಗದ್ದೆ ಹೆಸರು ಶಾಶ್ವತವಾಯ್ತು.

ಕಾಲ ಉರುಳಿತು. ಆ ರೈತನ ಕುಟುಂಬ ಬೆಳೆಯಿತು. ದಾಯಾದಿಗಳ ಮನೆಗಳಾದವು. ಬೇರೆಯ ಒಕ್ಕಲುಗಳೂ ಬಂದರು. ಊರು ಬೆಳೆಯಿತು. ಯುವಕ ಪೀಳಿಗೆಗೆ ತಮ್ಮೂರಿನ ಹೆಸರು ಬದಲಾಯಿಸಬೇಕು ಎನ್ನುವ ಹಂಬಲ ಬೇರೂರಿತು. ಪಿಂಡಗದ್ದೆ ಅನಿಷ್ಟ ಹೆಸರೆಂದು ತೋರಿತು. ಆದರೆ ಯಾವ ಹೆಸರಿಗೂ ಒಮ್ಮತ ಬರಲಿಲ್ಲ. ಬದಲಾಗಿ ಹೊಸ ಹೆಸರಿನ ಸಲುವಾಗಿ ಊರಲ್ಲಿ ಗದಾ ಯುದ್ಧ, ಮುಷ್ಟಿ ಯುದ್ಧಗಳಾದವು.

ಆ ಸಮಯದಲ್ಲೇ ಪಿಂಡಗದ್ದೆಗೆ ಒಬ್ಬ ಶ್ರೀ ಶ್ರೀ ಮಠದ ಸ್ವಾಮಿಗಳು ಬಂದರು. ಊರಿನ ಜನರು ಅವರಿಗೆ ಭೈರವನ ಗುಡೀಲಿ ಜಾಗ ಮಾಡಿಕೊಟ್ಟರು. ಊರಿನ ಪಂಚಾಯ್ತಿಯವರು ತಮ್ಮ ಊರಿಗೆ ಹೊಸ ನಾಮಕರಣ ಮಾಡುವ ಕೆಲ್ಸವನ್ನು ಸ್ವಾಮಿಗಳಿಗೆ ಒಪ್ಪಿಸಿದರು. ಸ್ವಾಮಿಗಳಿಗೆ ಪೀಡೆ ಶುರುವಾಯ್ತು. ಊರಿನ ಬೇರೆ ಬೇರೆ ಕುಟುಂಬದವರು ತಮ್ಮ ತಮ್ಮವರು ಮಾಡಿದ್ದ ಸಾಧನೆಗಳನ್ನು ವರ್ಣಿಸಿ, ಪಿಂಡಗದ್ದೆಗೆ ತಾವು ಸೂಚಿಸಿದ ಹೆಸರನ್ನೇ ಇಡಬೇಕೆಂದೂ, ಇಲ್ಲದಿದ್ದರೆ ರಕ್ತಪಾತವೇ ಆಗುತ್ತೆಂದೂ, ಸ್ವಾಮಿಗಳಲ್ಲೂ ಭಯ ಹುಟ್ಟಿಸಿದರು. ಸ್ವಾಮಿಗಳಿಗೆ ಆತ್ಮರಕ್ಷಣೆಯ ಸವಾಲು ಎದ್ದಿತು. ಊರಿನ ಎಲ್ಲರ ಅಭಿಪ್ರಾಯಗಳನ್ನು ಕೇಳಿ ಒಂದು ತೀರ್ಮಾನಕ್ಕೆ ಬಂದರು. ತಾವು ಒಂದು ಹೆಸರನ್ನು ಒಂದು ಚೀಟಿಯಲ್ಲಿ ಬರೆದು ದೇವರ ಮುಂದಿದ್ದ ಹುಂಡಿಯಲ್ಲಿ ಹಾಕುವುದಾಗಿಯೂ, ಅದನ್ನು ಮೂರು ದಿನ ಪೂಜೆ ಮಾಡಿದ ಮೇಲೆ ಜನರು ಹುಂಡಿಯಿಂದ ಚೀಟಿ ತೆಗೆದು ತಮ್ಮ ಊರಿನ ಹೊಸ ಹೆಸರನ್ನು ನೋಡಿಕೊಳ್ಳಬಹುದೆಂದೂ ಹೇಳಿ, ಜನರನ್ನು ಒಪ್ಪಿಸಿದರು.

ಸ್ವಾಮಿಗಳು ಬುದ್ಧಿವಂತರು. ಎರಡು ದಿನ ರಾತ್ರಿ ಹಗಲು ಪೂಜೆ ನಡೆಸಿ, ಮೂರನೆಯ ದಿನ ಬೆಳಕು ಹರಿಯುವುದರೊಳಗಾಗಿ ತಮ್ಮ ಶಿಷ್ಯರೊಂದಿಗೆ ಊರಿಂದ ಪಲಾಯನ ಮಾಡಿದರು. ಊರಿನ ಜನ ತಮ್ಮ ದೇವಸ್ಥಾನದ ಖಾಯಂ ಪೂಜಾರಿಯಿಂದ ಅಂದಿನ ಪೂಜೆ ನಡೆಸಿ, ಹುಂಡಿಯನ್ನು ಸರ್ವ ಜನರ ಸಭೆಯ ಮುಂದೆ ಹಾಜರುಪಡಿಸಿ, ಒಡೆದು ಚೀಟಿ ತೆಗೆದರು. ಪಿಂಡಗದ್ದೆಗೆ ಶ್ರೀ ಶ್ರೀ ಮಠದ ಸ್ವಾಮಿಗಳು ಒಪ್ಪುವ ಹೆಸರು ಸೂಚಿಸಿದ್ದರು "ಪುಂಡಗದ್ದೆ"

(ನಾ. ಕಸ್ತೂರಿ "ಕೊರವಂಜಿ"ಗೆ ಹೇಳಿದ್ದು.)



"ನಮ್ಮ ರಾಣಿಗೆ ಕನ್ನಡ ಕಲೀಬೇಕು ಅಂತ ಬಹಾಳ ಇಷ್ಟಾರೀ.
"Learn Kannada" ಅನ್ನೋ ಪುಸ್ತಕ ಎಲ್ಲಿ ಸಿಗುತ್ತೇ ?"

# ಸಿಟಿ ಬಸ್ಸೂ ಪುಷ್ಪಕ ವಿಮಾನವೂ

—ಡಾ॥ ಮಲ್ಲಿಕಾರ್ಜುನ ಪರಡ್ಡಿ

---

'ಭೂಮಿಯ ಮೇಲೆ ಓಡಾಡುವ ಸಿಟಿ ಬಸ್ಸಿಗೂ ಆಕಾಶದಲ್ಲಿ ಸಂಚರಿಸುತ್ತಿದ್ದ ಪುಷ್ಪಕ ವಿಮಾನಕ್ಕೂ ಎತ್ತಣ ಸಂಬಂಧ ?' ಎಂದು ಮೂಗು ಮುರಿಯದಿರಿ. ಮುರಿದರೆ ನಿಮಗೆ ನಷ್ಟ, ಕಷ್ಟ. ಅದರಲ್ಲೂ ಹೆಣ್ಣು ಮಕ್ಕಳು ಮುರಿದರಂತೂ ತೀರಿಯೇ ಬಿಟ್ಟಿತು. ಮೂಗೇ ಇಲ್ಲದಾಗ ಮೂಗುತಿಗೆಲ್ಲಿ ಸ್ಥಾನ ? ಅವರ ಗಂಡಂದಿರಿಗೆ ಸ್ವಲ್ಪ ಸಮಾಧಾನವಾದರೂ ಆದೀತು. ಇರಲಿ, ಪ್ರಸ್ತುತ ವಿಷಯಕ್ಕೆ ಬರೋಣ. ಸಂಬಂಧವಿಲ್ಲದಲ್ಲಿ ಸಂಬಂಧ ಕಲ್ಪಿಸುವುದೇ ಮೇಧಾವಿಗಳ ಲಕ್ಷಣ ವಲ್ಲವೇ? ಕವಿ ಕುಲಗುರುವೆಂದು ಪ್ರಸಿದ್ಧನಾದ ಕಾಳಿದಾಸನು ಆ ಕೆಲಸ ಮಾಡಿದರೆ, ಆಧುನಿಕ ಕೋಳಿದಾಸರು ಮಾಡಿದರೆ ತಪ್ಪೇನು ? ದಿಲೀಪ ಮಹಾರಾಜನು ಆಳು ತ್ತಿದ್ದ ಭೂ ಲೋಕ ಸಾಮ್ರಾಜ್ಯ ಮತ್ತು ದೇವೇಂದ್ರನಾಳುತ್ತಿದ್ದ ಸ್ವರ್ಗ ಲೋಕ ಸಾಮ್ರಾಜ್ಯಗಳಲ್ಲಿ ಕೇವಲ ಸ್ಥಾನ ವ್ಯತ್ಯಾಸವನ್ನು ಬಿಟ್ಟರೆ ಉಳಿದೆಲ್ಲ ವಿಷಯಗಳಲ್ಲಿ ಸೌಮ್ಯವನ್ನು ಕವಿ ಕಂಡಿರುವದು ಎಷ್ಟು ಸಮಂಜಸ ! ಈಗ ಅವನ ಮಾತಿನಲ್ಲಿಯೇ ಕೇಳಿ, ನನ್ನಲ್ಲಿ ವಿಶ್ವಾಸವಿಲ್ಲದಿದ್ದರೆ:

ಮಹೀತಲಸ್ಪರ್ಶನ ಮಾತ್ರ ಭಿನ್ನಂ
ಋದ್ಧಂ ಹಿ ರಾಜ್ಯಂ ಪದಮೈಂದ್ರಮಾಹು: ॥

ಇದೇ ರೀತಿಯ ಹೋಲಿಕೆಯನ್ನು ಸಿಟಿ ಬಸ್ಸು ಮತ್ತು ಪುಷ್ಪಕ ವಿಮಾನಗಳಲ್ಲಿ ಕಂಡರೆ ತಪ್ಪೇನು ? ಈಗ ಅರ್ವಾಚೀನ ವಿಷಯವಾವುದೇ ಇದ್ದಲ್ಲಿ ಅದರ ಪ್ರಾಚೀ ನತೆ, ಭವ್ಯ ಪರಂಪರೆಯನ್ನು ಸಂಶೋಧಿಸಿ, ಸಂತೋಷವಷ್ಟೇ ಅಲ್ಲ, ಹೆಮ್ಮೆ ಪಡುವ ವಿದ್ವಾಂಸರಿಗೆ ನಮ್ಮಲ್ಲಿ ಕೊರತೆ ಇಲ್ಲ. ಯಾವುದೇ ವಸ್ತು ಪ್ರಾಚೀನವೆಂದು ತಿಳಿದು ಬಂದರೆ ಅದರ ಕಳ್ಳ ಸಾಗಾಣಿಕೆ (Smuggling ಎಂದರೆ ಬೇಗ ಅರ್ಥವಾದೀತು!) ಬಹು ಲಾಭದಾಯಕವಾಗುತ್ತದೆ. ಆದ್ದರಿಂದ ಹೊಸ ವಸ್ತುವಿಗೂ ಹಳೆಯ ರೂಪ ವನ್ನು ಕೊಡಲು ವ್ಯಾಪಾರೀ ಮನೋಭಾವದ ನಮ್ಮ ಪ್ರಭಾವಶಾಲಿಗಳಾದ ವ್ಯಕ್ತಿ ಗಳು ಪ್ರಯತ್ನಿಸುತ್ತಿರುವುದು ಸ್ತುತ್ಯವಾದ ಸಂಗತಿಯಾಗಿದೆ. ಇಷ್ಟೆಲ್ಲ ಹೇಳುವದರ ಉದ್ದೇಶವಿಷ್ಟೇ. ನಮ್ಮ ಈಗಿನ ನಗರ ಸಾರಿಗೆ ಬಸ್ಸು (ಸಿಟಿ ಬಸ್ಸು ಎಂದರೆ ಕನ್ನಡಿ

ಗರಿಗೆ ಬೇಗ ಅರ್ಥವಾಗುತ್ತದೆ)ಗಳ ವ್ಯವಸ್ಥೆಗೆ ರಾಮಾಯಣ ಕಾಲಕ್ಕೆ ಪ್ರಸಿದ್ಧ ವಾದ ಅಂದರೆ ಅತ್ಯಂತ ಪ್ರಾಚೀನವಾದ ಪುಷ್ಪಕ ವಿಮಾನವೇ ಪ್ರೇರಣೆಯನ್ನಿತ್ತಿದೆ ಎಂಬ ನೆನೆದಾಗ ರೋಮಾಂಚನ ಉಂಟಾಗದೇ ಇರದು.

ಹಾಗಾದರೆ ಸಿಟಿ ಬಸ್ಸಿನ ವೈಭವವನ್ನು ಮೊದಲು ಸ್ವಲ್ಪ ನೋಡಬಹು ದಲ್ಲವೇ ? ಏಕೆಂದರೆ ಭೂ ಲೋಕದಲ್ಲಿ ಅಂದರೆ ನಮ್ಮ ನಡುವೆ ಸಂಚರಿಸುತ್ತಿರುವ ಅಂದರೆ ನಮಗೆಲ್ಲ ಚಿರಪರಿಚಿತವಾದ ಸಿಟಿ ಬಸ್ಸನ್ನು ನೋಡದೇ, ಆಕಾಶ ಸಂಚಾರಿ ಯಾಗಿದ್ದ ಪುಷ್ಪಕದ ಕಲ್ಪನೆಯಾದರೂ ನಮಗೆ ಹೇಗಾದೀತು ? ಪ್ರೇರಣೆ ಮೇಲಿಂದ (ಅಲ್ಲಿಂದ) ಬಂದಿದ್ದರೂ ನಮ್ಮಂಥ ಸಾಮಾನ್ಯ ನಾಗರಿಕರಿಗೆ ಅದರ ಸ್ಥಿತಿಗತಿ ಅರ್ಥ ವಾಗಬೇಕಾದರೆ ನಾವೊಮ್ಮೆ ಸಿಟಿ ಬಸ್ಸನ್ನು ನೋಡಬೇಕು. ಸಾಧ್ಯವಾದರೆ (ಎಷ್ಟೋ ಸಲ ಅದು ಅನಿವಾರ್ಯ) ಅದರಲ್ಲೊಮ್ಮೆ ಸಂಚರಿಸಬೇಕು. ಆ ಅದ್ಭುತವಾದ ಅನುಭೂತಿಯನ್ನು ಪಡೆದ ಬಳಿಕಲ್ಲವೇ ಪುಷ್ಪಕ ವಿಮಾನ ಪ್ರಯಾಣದ ಕಲ್ಪನೆ ಸಾಧ್ಯ ? ಸಿಟಿ ಬಸ್ಸಿನ ಈ ಅದ್ಭುತ ರಮ್ಯ ನೋಟವನ್ನು ಕಣ್ಣಾರ ಕಂಡವರಿಗೆ ಅದರ ಹಿಂದಿರುವ ದಾರ್ಶನಿಕ ಕಾರಣವನ್ನರಿಯುವದು ಅಗತ್ಯ. ಸಿಟಿ ಬಸ್ಸಿನಲ್ಲಿ ಸ್ವಲ್ಪ ಕಾಲ ಪ್ರಯಾಣ ಮಾಡಬೇಕಾಗಿರುವಾಗ ಸೀಟುಗಳ ಮೇಲೆ ಕೂಡ್ರುವವರು ಕೈಲಾಗದವರು, ಕೆಲಸಗೇಡಿಗಳು, ವಯಸ್ಸಾದವರೆಂಬ ಭಾವನೆ ಸಹಜವಾಗಿ ನಮ್ಮ ಯುವ ಜನಾಂಗದಲ್ಲಿ ಬೇರೂರಿದೆ. ಈ ಭಾವನೆ ನಿಜಕ್ಕೂ ಶುಭ ಲಕ್ಷಣವಲ್ಲವೆ ? ಸೀಟುಗಳಿದ್ದರೂ ನಿಲ್ಲವದು ಸಾಧ್ಯವಾದರೆ ಯಾವುದೇ ಆಧಾರವಿಲ್ಲದೆ ಸೆಟೆದು ನಿಲ್ಲು ವದು ಸಭ್ಯತೆಯ ಲಕ್ಷಣ. ಒಳಗೆ ನಿಲ್ಲಲು ಸ್ಥಳಾವಕಾಶವಿದ್ದರೂ ಮೆಟ್ಟಿಲುಗಳ ಮೇಲೆ ನಿಲ್ಲುವದು ಇನ್ನೂ ಹೆಚ್ಚು ನಾಗರಿಕತೆಯ ಲಕ್ಷಣ. ಸುಶಿಕ್ಷಿತರು. ಸಭ್ಯತೆ ಯವರು ಇದನ್ನರಿತೇ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿರಬೇಕಾದರೆ ಈ ದೃಶ್ಯ ಸರ್ವೇಸಾಮಾನ್ಯವಾಗಿದೆ. ಇದುವೇ ಯುಗಧರ್ಮವೆಂದು ತಿಳಿಯಬೇಕು.

ಒಂದೇ ಕಾಲನ್ನು ಬಸ್ಸಿನಲ್ಲಿರಿಸಿ ಒಂದು ಕೈಯಿಂದ ಕಂಬಿಯನ್ನು ಹಿಡಿದು (ಏನಾದರೂ ಹೆಚ್ಚು ಕಡಿಮೆಯಾದರೆ ಕಂಡಕ್ಟರ್ ಮತ್ತು ಡ್ರೈವರ್ ಇಬ್ಬರೂ ಕಂಬಿ ಎಣಿಸುವ ಪೂರ್ವ ಸೂಚನೆ ಇದಾಗಿರಬಹುದೇ ?) ದೇಹದ ಉಳಿದ ಭಾಗವನ್ನು ಹೊರಗೆ ಹಾಕಿ ಸರ್ಕಸ್ ಮಾಡುವದಂತೂ ಸಭ್ಯತೆಯ ಮೇರುವೆಂದು ತಿಳಿಯಬೇಕು. ಆ ನೋಟ ಎಷ್ಟು ರಮ್ಯ ! ಆ ದೃಶ್ಯವನ್ನು ನೋಡದವ ದೃಷ್ಟಿ ಇದ್ದರೆಷ್ಟು, ಇಲ್ಲ ದಿದ್ದರೆಷ್ಟು ? ಅಂತೂ ಇಂತೂ ಬಸ್ಸು ಭುರ್ರನೆ ಓಡುತ್ತಿರುವಾಗಿನ ನಯನ ಮನೋಹರ ರೂಪ ನೋಡಬೇಕಾದರೆ ದೇವತೆಗಳೂ ಸಹ ಭೂಮಿಗೆ ಅವತರಿಸ ಬೇಕಾಗುತ್ತದೆ. ಬಸ್ಸಿನ (ಕಿಟಕಿಯ) ಹೊರಗೆ ದೇಹದ ಯಾವುದೇ ಭಾಗವನ್ನು ಹಾಕಬಾರದೆಂಬ ನಿಯಮ ಸಿಟಿ ಬಸ್ಸಿಗೆ ಅನ್ವಯಿಸುವುದಿಲ್ಲ. ಅನ್ವಯಿಸಿದರೆ ನಡೆಯು ವದೂ ಇಲ್ಲ. ಏಕೆಂದರೆ ನಮ್ಮ ಯುವ ಪೀಳಿಗೆ ಬಸ್ಸಿನ ಬಾಗಿಲಿನ ಹೊರಗೆ ತಮ್ಮ

ದೇಹದ ಹೆಚ್ಚಿನ ಭಾಗವನ್ನು ಹಾಕುತ್ತಾರಾದ್ದರಿಂದ ಈ ನಿಯಮವನ್ನು ಅನ್ವಯಿಸಲು ಬಾರದು. ಕಾನೂನುಬಾಹಿರವಾದುದನ್ನು ಏನೂ ಅವರು ಮಾಡುವದಿಲ್ಲ. ವಸ್ತು ಸ್ಥಿತಿ ಹೀಗಿರುವಾಗ ಒಳಗೆ ಕೂಡ್ರಲು, ನಿಲ್ಲಲು ಸ್ಥಳವಿದೆಯೇ ಇಲ್ಲವೇ ಎಂಬುವನ್ನು ತಿಳಿಯಲು ಬೃಹಸ್ಪತಿಗೂ ಸಾಧ್ಯವಿಲ್ಲ. ಅದರ ಊಹೆಯೇ ಅವನಿಗೆ ಅಸಂಭವವಾದಾಗ ನಿರ್ಣಯದ ವಿಷಯ ಕೇಳುವದೇ ಬೇಡ. ಹಾಗಾಗಿ ಎಷ್ಟೋ ವೇಳೆ ಅನೇಕ ನಿಲುಗಡೆ (ಸ್ಟಾಂಪ್ ಎಂದರೆ ಸುಲಭವಾಗಿ ತಿಳಿದೀತು!) ಗಳಲ್ಲಿ ಆ ಬಸ್ಸುಗಳು ನಿಲ್ಲದೇ ಒಮ್ಮೆಯಾದರೂ **non-stop express** (ತಡೆರಹಿತ ಎನ್ನುವುದು ಅರ್ಥವಾಗದ ಕನ್ನಡ) ಬಸ್ಸಾಗಿ ಪರಿವರ್ತನೆಗೊಳ್ಳುತ್ತವೆ. ಅಲ್ಲಿ ಬಹು ಕಾಲ ಬಸ್ಸಿಗಾಗಿ ಚಾತಕ ಪಕ್ಷಿಯಂತೆ ಕಾಯ್ದು ನಿಂತ ಪ್ರಯಾಣಿಕರನೇಕರು ತಮ್ಮ ಅಸಹಾಯಕತೆಯನ್ನು ವ್ಯಕ್ತಮಾಡದೆ ಬೇರೇನು ಮಾಡಲು ಸಾಧ್ಯ ? ಆಧುನಿಕ ಸಿಟಿ ಬಸ್ಸಿಗೆ ಪ್ರೇರಣೆಯಿತ್ತ ಪುಷ್ಪಕ ವಿಮಾನದ ಅವಸ್ಥೆಯ ವರ್ಣನೆಯನ್ನೀಗ ನೋಡೋಣ.

ರಾವಣ ವಧಾ ನಂತರ ಸೀತೆಯೊಡನೆ (ಕೆಲಸವಾದ ಮೇಲೆ ಲಕ್ಷ್ಮಣನದೇನು ಕೆಲಸವೆನ್ನಬಹುದೇ ? ನಡೆಯದು. ಏಕೆಂದರೆ ಮುಂದೆ ಜನಾಪವಾದಕ್ಕಂಜಿ ಸೀತೆಯನ್ನು ಕಾಡಿಗಟ್ಟಲು ಅವನು ಬೇಕೇ ಬೇಕು.) ರಾಮಚಂದ್ರನು ಅಯೋಧ್ಯೆಗೆ ತೆರಳುವಾಗ ತನ್ನ ಹಿರಿಮೆಯನ್ನು (ವಾ)ನರಪ್ರಿಯತೆಯನ್ನು ಅಯೋಧ್ಯಾವಾಸಿಗಳಿಗೆ ತೋರಿಸಲು ರಾಕ್ಷಸವಾನರಾದ ಪ್ರಯಾಣಿಕರನೇಕರನ್ನು ತನ್ನೊಡನೆ ಕರೆದುಕೊಂಡು ಬರುತ್ತಾನೆ. ಆದರೆ ಯಾರು ಯಾರು ಎಲ್ಲೆಲ್ಲಿ ಕುಳಿತಿದ್ದರು, ನಿಂತಿದ್ದರೆಂಬ ವಿಷಯುವನ್ನು ಆದಿ ಕವಿ ವಾಲ್ಮೀಕಿಯಾಗಲೀ, ಕವಿ ಕುಲಗುರುವಾದ ಕಾಳಿದಾಸನಾಗಲೀ ತಮ್ಮ ಕಾವ್ಯಗಳಲ್ಲಿ ವಿವರಿಸಿಲ್ಲ. ನಮ್ಮ ಊಹೆಗೇ ಬಿಟ್ಟುಬಿಟ್ಟಿದ್ದಾರೆ.

"ಆರುರೋಹ ತದಾ ರಾಮಸ್ತದ್ ವಿಮಾನಮನುತ್ತಮಂ!!" ಲಂಕೆಯಲ್ಲಿ ರಾಕ್ಷಸೇಂದ್ರ, ಕಪೀಂದ್ರ ಮೊದಲಾದ ಪ್ರಯಾಣಿಕರನ್ನು ಕರೆತರುವದಷ್ಟೇ ಅಲ್ಲ, ಕಿಷ್ಕಿಂಧೆಯಲ್ಲಿರುವ ವಾನರ ಸ್ತ್ರೀಯರನ್ನು ಹತ್ತಿಸಿಕೊಳ್ಳಲು ವಿಮಾನ ನಿಲ್ದಾಣವಿಲ್ಲದಿದ್ದರೂ ಕಡ್ಡಾಯವಾಗಿ ಇಳಿಸಬೇಕಾಗುತ್ತದೆ. ಏಕೆಂದರೆ ಸ್ತ್ರೀ ಪಕ್ಷಪಾತಿಯಾದ ಸೀತೆಯ ಭಯೋತ್ಪಾದನೆಗೆ ಹೆದರಲೇಬೇಕಾಗುತ್ತದೆ. ಎಷ್ಟೋ ಸಂದರ್ಭಗಳಲ್ಲಿ ನಮ್ಮ ಯುವ ಪೀಳಿಗೆ ಬಸ್ ಸ್ಟಾಪ್ ಇಲ್ಲದ ಕಡೆಯೂ ಬಸ್ಸು ನಿಲ್ಲಿಸುವದರಲ್ಲಿ ಸಫಲರಾಗುವುದಕ್ಕೆ ಸೀತೆಯ ಈ ಯುಕ್ತಿಯೇ ಪ್ರೇರಣೆಯನ್ನು ಕೊಟ್ಟಿರಬಹುದೇ ? ಒಳಗೆ ನಿಲ್ಲಲು ಸ್ಥಳವಿದ್ದರೂ ಬಸ್ಸು ನಿಲ್ಲಿಸದಿರಲು ನಮ್ಮ ಅನೇಕ ಕಂಡಕ್ಟರುಗಳು ತಮ್ಮ ಡ್ರೈವರಿಗೆ ಹೇಳುವದನ್ನು ನೋಡಿದಾಗ ರಾಮನ ಸಜ್ಜನಿಕೆಯ ಪರಿಚಯ ನಮಗಾಗುತ್ತದೆ. ಅಥವಾ ಟಿಕೇಟು ಕೊಡುವ ಸಮಸ್ಯೆ ತ್ರಾಸು ಇಲ್ಲದಿರುವದರಿಂದ ರಾಮನು ಇಷ್ಟು ಉದಾರಿಯಾಗಿ ನಡೆದಿರಬಹುದೇ ? ಸ್ತ್ರೀ ಸೀತೆಯ ಹಠ ಒತ್ತಾಯ

ಪೂರ್ವಕ ಅಭಿಲಾಷೆ ಇಂತು ವ್ಯಕ್ತವಾಗಿದೆ:

"ಅಸ್ಯೇಷಾಂ ವಾನರೇದ್ರಾಣಾಂ ಸ್ತ್ರೀಭಿ ಪರಿವೃತಾ ಹ್ಯಹಮ್"

ಹೀಗೆ ಎಲ್ಲರನ್ನೂ ತನ್ನಲ್ಲಿ ತುಂಬಿಕೊಂಡು ಆ ಪುಷ್ಪಕ ವಿಮಾನ ಮೆಲ್ಲ ಮೆಲ್ಲನೇ (?) ಚಲಿಸುತ್ತಿರುವಾಗ ಯಾರಾರು ಎಲ್ಲೆಲ್ಲಿ ಆಸೀನರಾಗಿದ್ದರು, ನಿಂತಿದ್ದರು ಎಂಬ ಪ್ರಶ್ನೆ ಸಹಜವಾಗಿಯೇ ನಮ್ಮನ್ನು ಕಾಡುತ್ತದೆ. ರಾಮನಂತೂ ಸೀತೆಯನ್ನು ತನ್ನ ತೊಡೆಯ ಮೇಲೆ ಕೂಡ್ರಿಸಿಕೊಂಡಿದ್ದನೆಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ವಾಲ್ಮೀಕಿಯಂತೂ ಬಾಯಿಬಿಟ್ಟು ಹೀಗೆ ಹೇಳಿದ್ದಾನೆ :·

"ಅಂಕೇನಾದಾಯ ವೈದೇಹೀಂ ಲಜ್ಜಮಾನಾಂ ಮನಸ್ವಿನೀಂ॥"

ಇದನ್ನೇ ಕುಮಾರ ಹಾಸನು ರಾಮನ ಬಾಯಿಂದ ಹೀಗೆ ಹೇಳಿಸಿದ್ದಾನೆ

ಇದಂ ವಿಧಾಯೋಚಿತಮಂಕಮಾಸರಂ
ಭುಜೇನ ಮತ್ಕಂಠ ತಟಾವಲಂಬಿನೀ ॥

ಈ ರೀತಿ ಬಹು advanced ಆಗಿ (ಮುಂದುವರೆದವನಾಗಿ) ಎಲ್ಲರೆದುರೂ ಸೀತೆಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಳ್ಳುವ ರಾಮನುದಿಸಿದ ದೇಶದಲ್ಲಿ ಹುಟ್ಟಿದ ನಾವು ಭಾರತೀಯರು ತೀರಾ ಹಿಂದುಳಿದವರೆನ್ನದೆ ಗತ್ಯಂತರವಿಲ್ಲ. ಇಂಥ ಆರ್ಯ ಸಂಸ್ಕೃತಿಯ ಭವ್ಯ ಪರಂಪರೆಯನ್ನು ಅನೂಚಾನವಾಗಿ ವಿದೇಶೀಯರಾದರೂ ಪಾಲಿಸಿಕೊಂಡು ಬರುತ್ತಾರೆಂಬುದು ಸಮಾಧಾನದ ಸಂಗತಿ. ರಾಮ ಸೀತೆಯರಿಗಾಗಿಯೇ ಪ್ರತ್ಯೇಕ ರೂಮು ಇದ್ದಿತೆನ್ನುವದಕ್ಕೆ ಯಾವುದೇ ಪುರಾವೆ ಇಲ್ಲ. ರಾವಣನ ಕೈಸೆರೆಯಿಂದ ತನ್ನ ಹೆಂಡತಿಯನ್ನು ಬಿಡಿಸಿಕೊಂಡಿರುವಾಗ ರಾಜಾರೋಷವಾಗಿ ತನ್ನ ತೊಡೆಯ ಮೇಲೆ ಅವಳನ್ನು ಕೂಡ್ರಿಸಿಕೊಳ್ಳುವಲ್ಲಿ ಯಾವ ದೋಷವಿದೆ ? ಆ ರೀತಿ ರಾಮನು ನಡೆದುಕೊಳ್ಳುವಲ್ಲಿಯ ಔಚಿತ್ಯವನ್ನರಿತುಕೊಂಡು ಕಾರ್ಯೋನ್ಮುಖರಾದರೆ ಬಸ್ಸುಗಳಲ್ಲಿಯ ಸ್ಥಳಾವಕಾಶದ ಸಮಸ್ಯೆ ಪೂರ್ತಿಯಲ್ಲದಿದ್ದರೂ ಸ್ವಲ್ಪವಾದರೂ ಕಡಿಮೆಯಾದೀತೆಂಬ ನಂಬುಗೆ ನನ್ನದು. ನಮ್ಮ ಯುವ ಜನಾಂಗ ಆ ಪರಂಪರೆಯನ್ನು ಪಾಲಿಸುವ ಮೊದಲ ಹೆಜ್ಜೆಯಾಗಿ ತಮ್ಮ ಮಿತ್ರರನ್ನು ತೊಡೆಗಳ ಮೇಲೆ, ಹೆಗಲ ಮೇಲೆ ಕೂಡ್ರಿಸಿಕೊಳ್ಳುವದು ನಿಜಕ್ಕೂ ಅಭಿಮಾನದ ಸಂಗತಿ, ಆದರೆ ಇದೆಲ್ಲ ಗೌಣವಾದ ವಿಷಯ. ಈಗ ಮುಖ್ಯ ವಿಷಯಕ್ಕೆ ಬರೋಣ.

ಒಳಗೆ ಜಾಗ ಇಲ್ಲದಿದ್ದರಿಂದಾಗಿಯೋ, ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಅಂದರೆ ಉತ್ಸಾಹಾತಿರೇಕದಿಂದಾಗಿಯೋ ಆ ಕಪೀಂದ್ರರು ಪುಷ್ಪಕ ವಿಮಾನದ ಕಂಬಿ

ಗಳನ್ನು ತಮ್ಮ ಕೈಗಳಿಂದ ಹಿಡಿದು ಪೂರ್ತಿಯಾಗಿ ಹೊರಗೆ ನೇತಾಡುವ ದೃಶ್ಯ ರುಪ್ರ ಮನೋಹರವಲ್ಲವೇ ? ಇಂಥ ಪರಮದ್ಭುತ ದೃಶ್ಯವನ್ನು ವರ್ಣಿಸುವಲ್ಲಿ ವಾಲ್ಮೀಕಿ ಯಾಗಲೀ, ಕಾಳಿದಾಸನಾಗಲೀ ಮುಂದಾಗದಿರುವದು ಖೇದದ ಸಂಗತಿ. ಆದರೆ ಆಧುನಿಕ (ಅಂದರೆ ವ್ಯಾವಹಾರಿಕ) ಪ್ರಜ್ಞೆಯುಳ್ಳ ಕುಮಾರದಾಸನು ಈ ಭವ್ಯವೂ ರಮ್ಯವೂ ಆದ ದೃಶ್ಯವನ್ನು ತನ್ನ 'ಜಾನಕೀಹರಣ'ವೆಂಬ ಮಹಾ ಕಾವ್ಯದಲ್ಲಿ ಹೀಗೆ ವರ್ಣಿಸಿದ್ದಾನೆ:

ವಿಧಾಯ ಪಾದಾ ದೃಢಮಕ್ಷಪಾಟಕೇ
ವಿಸೃಜ್ಯ-ದೇಹಂ ಗಗನೇ ಸಕೌತುಕಾ ।
ಅಮೀ ಸಮೀಪಾಗತಮೇಘಭಿತ್ತಿಷು
ಸ್ಪೃಶಂತಿ ವಿದ್ಯುದ್ ವಲಯಂ ವಲೀಮುಖಾ ॥

ತಮ್ಮೆರಡು ಕಾಲುಗಳಿಂದ ವಿಮಾನದ ಗಾಲಿಯನ್ನೋ, ಬೇರೊಂದು ಭಾಗವನ್ನೋ ಹಿಡಿ ಗಟ್ಟಿಯಾಗಿ ಹಿಡಿದು ಉಳಿದೆಲ್ಲ ದೇಹವನ್ನು ಆಕಾಶದಲ್ಲಿ ತೂರಿಸಿ ತಮ್ಮ ಬಳಿ ಬರುತ್ತಿರುವ ಮೋಡಗಳಲ್ಲಿಯ ಮಿಂಚಿನ ಬಳ್ಳಿಯನ್ನು ಕುತೂಹಲದಿಂದ ಮುಟ್ಟುತ್ತಿರುವ ಆ ದೃಶ್ಯದ ಕಲ್ಪನೆಯಿಂದಲೇ ಮೈ ನವಿರೇಳುತ್ತದೆ. ಈ ವಿಷಯವಾಗಿ ನಮ್ಮ ಯುವಕರು ಹಿಂದೆ ಬಿದ್ದಿಲ್ಲವೆಂಬುದನ್ನು ನೋಡಿದರೆ ಆ ನಮ್ಮ ಹಿಂದಿನ ಭವ್ಯ ಪರಂಪರೆಯನ್ನು ಕಾಯ್ದುಕೊಂಡು ಬಂದಿದ್ದೇವೆಂಬ ನೆಮ್ಮದಿ, ಹೆಮ್ಮೆ ನಮ್ಮದಾಗುತ್ತದೆ.

ಕಪೀಂದ್ರರು ಎರಡು ಕಾಲುಗಳಿಂದ ವಿಮಾನದ ಒಂದು ಭಾಗವನ್ನು ಗಟ್ಟಿಯಾಗಿ (ಬೀಳುವ ಹೆದರಿಕೆಯಿಂದ) ಹಿಡಿದುಕೊಂಡಿದ್ದರೆ ನಮ್ಮ ತರುಣರು ಒಂದೇ ಕಾಲನ್ನು ಬಸ್ಸಿನ ಅಲ್ಪ ಭಾಗಕ್ಕೆ ಊರಿ, ಒಂದೇ ಕೈಯಿಂದ ಸಲಾಕೆಯನ್ನು ಲೀಲಾಜಾಲವಾಗಿ ಹಿಡಿದುಕೊಂಡು ಇಡೀ ದೇಹವನ್ನು ಗಾಳಿಯಲ್ಲಿ ತೂರಿಸುತ್ತಾರೆ. ತಮ್ಮ ಬಳಿ ಯಾವುದೇ ವಸ್ತು ಬಂದರೂ ಅಷ್ಟೇ ಕೌತುಕದಿಂದ ತಮ್ಮ ಇನ್ನುಳಿದ ಕಾಲಿನಿಂದ ಹಾಗೂ ಕೈಯಿಂದ ಮುಟ್ಟಿ ಮುಟ್ಟಿ ನೋಡಿ ಆನಂದಿಸುವ ದೃಶ್ಯ ಪ್ರೇಕ್ಷಕರ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ. ಆ ಕಪೀಂದ್ರರಲ್ಲಿ ಕೆಲವರಾದರೂ ತಮ್ಮ ಬಾಲವನ್ನು ಉಪಯೋಗಿಸಿ ತಮ್ಮೆಲ್ಲ ದೇಹವನ್ನು ಆಕಾಶದಲ್ಲಿ ತೂರಿದ ದೃಶ್ಯ ಕವಿಯ ದೃಷ್ಟಿಗೆ ಬೀಳದೆ ಹೋಗಿರಬಹುದು. ನಮ್ಮ ತರುಣ ಪೀಳಿಗೆಗೆ ಇದೊಂದು ಕೊರತೆಯೆಂದು ಒಪ್ಪಬೇಕಲ್ಲವೇ ? ಇಲ್ಲದಿದ್ದರೆ ಅವರೂ ಸಹ ಅದಕ್ಕೂ ಹೆಚ್ಚಿನ ಸಾಹಸವನ್ನು ಪ್ರದರ್ಶಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅವರ ಈ ಸಾಹಸವನ್ನು ಕಂಡಾಗ, ಮೇಲೆ ಸಿಟಿ ಬಸ್ಸಿನಂತೆ ಪುಷ್ಪಕ ವಿಮಾನ ಆಕಾಶದಲ್ಲಿ ಸಂಚರಿಸುವದನ್ನು

ಊಹಿಸಿ, ಕಲ್ಪಿಸಿ ಆನಂದಗೊಳ್ಳುತ್ತಿರುವಾಗ ನಮ್ಮ ಹೃದಯ ತುಂಬಿ ಕಾವ್ಯ ರಸ ಈ ರೀತಿ ಹೊರಹೊಮ್ಮುತ್ತಿದೆ

ಕೇಳು ಭಾರತವಾಸಿ. ಭರದಲಿ
ಬೀಳುತೇಳುತ ನಡೆವ ಬಸ್ಸಲಿ
ದಾಳಿ ಗೈಯುತ ಕಂಬಿಯನು ಕೈಯೊಂದರಲಿ ಹಿಡಿದು ।
ಕಾಲಲೊಂದಲಿ ನಿಂತು ದೇಹವ
ಗಾಳಿಯಲಿ ತೂರಿಸುತ ಯೌವ್ವನ
ಕೇಳಿಯಲಿ ವೈಭವವ ಮರವರು ನಮ್ಮ ಪೂರ್ವಜರ ॥

## ಕಡಲ ಕೊರೆತ : ಶಿಬಿರದಿಂದ ಪ್ರತ್ಯಕ್ಷ ವಾರ್ತೆ

— ತ್ರಿ



ಕಡಲ ಕೊರೆತವನ್ನಾದ್ರೂ ತಡೆದುಕೊಳ್ಳಬಹುದು ಆದರೆ.........
ಇವರ ಕೊರೆತ ತಡೆಯೊಕ್ಕಾಗಲ್ಲ ಮಾರಾಯ್ರೆ !

# ಓದುಗರ ಅನಿಸಿಕೆ

ಪ್ರಿಯರೆ,

ಇತ್ತೀಚಿನ ಕನ್ನಡ ಮಾಸ ಪತ್ರಿಕೆಗಳಲ್ಲಿ "ಅಪರಂಜಿ" ಹೊಸ ಆಯಾಮದ "ತಿಳಿಹಾಸ್ಯ"ದ ಪ್ರತೀಕವಾಗಿದೆ.

ಆಗಸ್ಟ್ ತಿಂಗಳ "ಪುರಾಣದ ಪುಣ್ಯ ಕಥೆಗಳ" ಶೀರ್ಷಿಕೆ ಚೆನ್ನಾಗಿದೆ. ಮುಂದುವರಿಸಬಹುದು. ಆದರೆ ಚಿತ್ರ ರಚನೆ ಅಷ್ಟಾಗಿ ಆರೋಗ್ಯಕರವಾಗಿಲ್ಲ. ದಯವಿಟ್ಟು ಗಮನಿಸಿ. ಇನ್ನೊಂದು ವಿನಂತಿ. ವಿದ್ಯಾರ್ಥಿಗಳಿಗೆ ತಿಳಿ ಹಾಸ್ಯದ ಪ್ರಜ್ಞೆ ಮೂಡಿಸಲು ಸ್ಪರ್ದೆಗಳನ್ನು ಏರ್ಪಡಿಸಿ. ಇದನ್ನು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ರಾಜಕೀಯ ವಿಡಂಬನೆ ಅಥವಾ ಇತ್ತೀಚಿನ ಯಾವುದಾದರೂ ಘಟನೆಯನ್ನು ವಿಷಯವಾಗಿಟ್ಟು ನಡೆಸಬಹುದು.

**ಕೆ. ಆರ್. ಸಂಜೀವ ಗುಪ್ತ**

ಬೆಂಗಳೂರು

ಮಾನ್ಯರೆ,

"ಪುರಾಣದ ಪುಣ್ಯ ಕಥೆ" (ವ್ಯಂಗ್ಯ ಕಥಾ ಚಿತ್ರಮಾಲಿಕೆ) ಉತ್ತಮವಾಗಿ ಮೂಡಿಬಂದಿದೆ. ಓದುಗರನ್ನು ಖಂಡಿತವಾಗಿ ರಂಜಿಸುತ್ತದೆ. ದಯವಿಟ್ಟು ಮುಂದುವರೆಸಿ.

**ಎಚ್. ಡುಂಡಿರಾಜ್**

ಉಡುಪಿ

**(ಓದುಗರಲ್ಲಿ ಬಿನ್ನಹ**

ನಿಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಲು ಈ ಪುಟ ಮೀಸಲು. ಈ ಸಂಚಿಕೆಯಲ್ಲಿನ ಬರಹ, ಕವನ, ಚಿತ್ರಗಳ ಬಗ್ಗೆ ಮುಕ್ತ ಅಭಿಪ್ರಾಯಗಳನ್ನು ಖಂಡಿತ ತಿಳಿಸಿ.

**ಸಂಪಾದಕ.)**



# ಶೀರ್ಷಿಕೆ ನೀವು ಯೋಚಿಸಿ !

---

ಹೆಸರಾಂತ ವ್ಯಂಗ್ಯ ಚಿತ್ರಕಾರ ಆರ್. ಕೆ. ಲಕ್ಷ್ಮಣ್ ಕೊರವಂಜಿಗೆ ನೀಡಿದ ಚಿತ್ರವೊಂದು ಕೆಳಗೆ ಇದೆ. ಇದಕ್ಕೆ ಸಾಂದರ್ಭಿಕವಾದ ಹಾಗೂ ವಿಡಂಬನಾತ್ಮಕ ಶೀರ್ಷಿಕೆಯನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ. ನಿಮ್ಮ ಶೀರ್ಷಿಕೆಗಳು **18–10–1987**ರ ಮುನ್ನ ಅಪರಂಜಿಗೆ ತಲುಪಬೇಕು.



